ಪ್ರಕಟಣೆ- 12

# ವ್ಯಾಸ ರಹಸ್ಯ

ರಾಮಕೃಷ್ಣ ಭಟ್ಟ : ಕೂಟೇಲು
೨೨/೦೨/೦೬

## ವಿದ್ವಾನ್ ಎನ್. ರಂಗನಾಥಶರ್ಮಾ




**ಉದಯ ಪ್ರಕಾಶನ**
ನಂ. 984, 11ನೇ 'ಎ' ಮುಖ್ಯರಸ್ತೆ,
3ನೇ ವಿಭಾಗ, ರಾಜಾಜಿನಗರ
ಬೆಂಗಳೂರು- 10. ದೂರವಾಣಿ : 3389143

**VYĀSA RAHASYA**
written by **Vidwan N. Ranganatha Sharma,**

Published by M.S. Srinivasa Rao,
**Udaya Prakashana**
No. 984, 11th 'A' Main Road,
3rd Block, Rajajinagar, Bangalore - 560 010.
Phone : 3389143



No. of Pages : vi + 69

First Edition : 1999

Price : Rs. 30/-

Cover Design : V. Anantha Hedge, Belagundli (U.K)

Typeset & Printed at : **Vāgartha Printonics**
No. 149, 8th Cross, N.R. Colony, Bangalore-19.
Ph.. 6527677, Pager 9624-285275

# ಮುನ್ನುಡಿ

ಮಹಾಭಾರತವನ್ನು ರಚಿಸಿದವರು ವ್ಯಾಸಮಹರ್ಷಿಗಳೆಂದು ಎಲ್ಲರಿಗೂ ತಿಳಿದಿದೆ. ಇವರು ದ್ವಾಪರಯುಗದಲ್ಲಿ ಇದ್ದುದರಿಂದ ಅದಕ್ಕಿಂತ ಹಿಂದಿನ ರಾಮಾಯಣಾದಿಗ್ರಂಥಗಳಲ್ಲಿ ಕಾಣಿಸಿಕೊಳ್ಳುವುದಿಲ್ಲ. ಇವರು ಸತ್ಯವತಿಯೆಂಬ ಅಂಬಿಗಸ್ತ್ರೀಯಲ್ಲಿ ಪರಾಶರಮುನಿಗಳಿಂದ ಜನಿಸಿದರು. ಈ ಸತ್ಯವತಿಯು ಅಂಬಿಗನ ಸಾಕುಮಗಳು. ಅವಳು ಅಂಬಿಗ ಸ್ತ್ರೀಯಲ್ಲ. ಅದ್ರಿಕಾ ಎಂಬ ಒಬ್ಬ ಅಪ್ಸರೆಯು ಉಪರಿಚರವಸುವಿನಿಂದ ಗರ್ಭಿಣಿಯಾಗಿದ್ದಳು. ಆಮೇಲೆ ಒಂದು ಶಾಪವು ಬಂದು ಮೀನಾದಳು. ಆ ಮೀನನ್ನು ಕತ್ತರಿಸಿದಾಗ ಈ ಹೆಣ್ಣುಮಗು ಸಿಕ್ಕಿತೆಂದೂ ಅದನ್ನು ಅಂಬಿಗನು ಸಾಕಿದನೆಂದೂ ಪುರಾಣಕಥೆ ಇದೆ. ಆದ್ದರಿಂದ ಸತ್ಯವತಿಯು ಉಪರಿಚರವಸುವಿನ ಮಗಳು.

ವ್ಯಾಸರು ಹುಟ್ಟಿದೊಡನೆ ಪರಾಶರರ ಅನುಗ್ರಹದಿಂದ ದೊಡ್ಡವರಾಗಿ ತಪಸ್ಸಿಗೆ ಹೊರಟುಹೋದರು. ಪರಾಶರರ ಪುತ್ರರಾದ್ದರಿಂದ ವ್ಯಾಸರಿಗೆ ಪಾರಾಶರ್ಯ ಎಂದೂ ಯಮುನಾನದಿಯಲ್ಲಿದ್ದ ಒಂದು ದ್ವೀಪದಲ್ಲಿ ಹುಟ್ಟಿದ್ದರಿಂದ ದ್ವೈಪಾಯನ ಎಂದೂ ಹೆಸರಿದೆ. ಬ್ರಹ್ಮಸೂತ್ರಗಳನ್ನು ರಚಿಸಿದ ಬಾದರಾಯಣರೂ ವ್ಯಾಸರೇ ಎಂದು ಹೇಳುತ್ತಾರೆ. ಬದರೀಕ್ಷೇತ್ರದಲ್ಲಿ ಹೆಚ್ಚಾಗಿ ನೆಲೆಸಿದ್ದರಿಂದ ಬಾದರಾಯಣರೆಂಬ ಹೆಸರೂ ಅವರಿಗೆ ಪ್ರಾಪ್ತವಾಯಿತು. ಅವರನ್ನು ಸ್ತುತಿಸುವ ಈ ಶ್ಲೋಕವು ವ್ಯಾಸರ ಮಹಿಮೆಯನ್ನು ವರ್ಣಿಸುತ್ತದೆ-

**ಅಚತುರ್ವದನೋ ಬ್ರಹ್ಮಾ ದ್ವಿಬಾಹುರಪರೋ ಹರಿಃ ।**
**ಅಭಾಲಲೋಚನಃ ಶಂಭುಃ ಭಗವಾನ್ ಬಾದರಾಯಣಃ ॥**

''ಭಗವಾನ್ ಬಾದರಾಯಣರು ನಾಲ್ಕು ಮುಖಗಳಿಲ್ಲದ ಇನ್ನೊಬ್ಬ ಬ್ರಹ್ಮನೇ ಸರಿ. ಎರಡು ಕೈಗಳುಳ್ಳ ವಿಷ್ಣುವೇ ಅವರು. ಹಣೆಯಲ್ಲಿ ನೇತ್ರವಿಲ್ಲದ ಮತ್ತೊಬ್ಬ ಶಿವನೇ ಅವರು.'' ಭಾರತಕ್ಕೆ ಪಂಚಮವೇದವೆಂದು ಖ್ಯಾತಿ ಇದೆ. ವೇದಾರ್ಥಗಳೆಲ್ಲವನ್ನೂ ಇದರಲ್ಲಿ ವಿವರಿಸಿರುವುದರಿಂದ ಈ ಹೆಸರು ಬಂದಿದೆ.

ಭಾರತದಲ್ಲಿರುವ ಭಗವದ್ಗೀತೆಯನ್ನು ಶ್ಲೋಕರೂಪವಾಗಿ ರಚಿಸಿದವರು ವ್ಯಾಸಮುನಿಗಳು. ಶ್ರೀಕೃಷ್ಣನು ಅರ್ಜುನನಿಗೆ ಮಾಡಿದ ಉಪದೇಶವನ್ನು ಈ ಶ್ಲೋಕಗಳಲ್ಲಿ ವ್ಯಾಸರು ವಿಸ್ತರಿಸಿ ಹೇಳಿದ್ದಾರೆ.

ವೇದವನ್ನು ನಾಲ್ಕು ವಿಭಾಗಗಳಾಗಿ ಸಂಹಿತೆ, ಬ್ರಾಹ್ಮಣ ಇತ್ಯಾದಿಯಾಗಿ ವಿಂಗಡಿಸಿ ಅಭ್ಯಾಸಕ್ಕೆ ಸೌಕರ್ಯವನ್ನು ಮಾಡಿಕೊಟ್ಟ ಮಹಾಮಹಿಮರು ವ್ಯಾಸರು. ವೇದಗಳನ್ನು ವಿಂಗಡಿಸಿದ್ದರಿಂದ ಇವರಿಗೆ ವೇದವ್ಯಾಸ ಎಂಬ ಹೆಸರು ಪ್ರಸಿದ್ಧವಾಯಿತು.

ಒಮ್ಮೆ ಘೃತಾಚೀ ಎಂಬ ಅಪ್ಸರೆಯನ್ನು ನೋಡಿದಾಗ ವ್ಯಾಸರ ವೀರ್ಯವು ಸ್ಖಲಿಸಿತು. ಇದು ದೈವಯೋಗದಿಂದ ಆದದ್ದು. ವೀರ್ಯವು ವ್ಯರ್ಥವಾಗ-ಬಾರದೆಂದು ವ್ಯಾಸರು ಅದನ್ನು ಅರಣಿಯಿಂದ ಮಥಿಸಿದಾಗ ತೇಜಸ್ವಿಯಾದ ಒಬ್ಬ ಬಾಲಕನು ಉದಿಸಿದನು. ಆ ಸಮಯದಲ್ಲಿ ಘೃತಾಚಿಯು ಶುಕಿಯ (ಹೆಣ್ಣುಗಿಳಿ) ರೂಪವನ್ನು ಧರಿಸಿ ಇದೆಲ್ಲವನ್ನೂ ನೋಡುತ್ತಿದ್ದಳು. ಆ ಬಾಲಕನು ಹುಟ್ಟುವುದಕ್ಕೆ ಈ ಶುಕಿಯು ನಿಮಿತ್ತಳಾದ್ದರಿಂದ ಆತನಿಗೆ ಶುಕ ಎಂದು ನಾಮಕರಣವಾಯಿತೆಂದು ತಿಳಿಯಬೇಕು. ಈ ಶುಕಮಹರ್ಷಿಗಳು ಜ್ಞಾನಿಗಳೂ ಮಹಾಯೋಗಿಗಳೂ ಆಗಿದ್ದರು. ಪರೀಕ್ಷಿತರಾಜನಿಗೆ ಭಾಗವತವನ್ನು ಇವರು ಶ್ರವಣಮಾಡಿಸಿದರು.

ವೇದವ್ಯಾಸರ ದೇಹವು ಕೃಷ್ಣವರ್ಣವಾಗಿತ್ತು. ಕೃಷ್ಣ ಎಂದರೆ ಕಪ್ಪು. ಆದ್ದರಿಂದ ಕೃಷ್ಣದ್ವೈಪಾಯನರೆಂದು ಇವರನ್ನು ಹೇಳುತ್ತಾರೆ. ಇವರು ಮಹಾತೇಜಸ್ವಿಗಳೂ ಉನ್ನತಕಾಯರೂ ಆಗಿದ್ದರು. ಜಟೆಯನ್ನು ಕೃಷ್ಣಾಜಿನವನ್ನೂ ಧರಿಸಿ ದಂಡಧಾರಿಗಳಾಗಿ ಸಂಚರಿಸುತ್ತಿದ್ದರು. ಮಹಾಭಾರತ, ಅಷ್ಟಾದಶಪುರಾಣಗಳು, ಬ್ರಹ್ಮಸೂತ್ರ -ಇವೆಲ್ಲವೂ ಈ ಮಹರ್ಷಿಗಳ ಕೃತಿಗಳು. ವಾಲ್ಮೀಕಿಮುನಿಗಳು ರಾಮಾಯಣವನ್ನು ರಚಿಸಿದಮೇಲೆ ಲೋಕೋಪಕಾರಿಗಳಾದ ಗ್ರಂಥಗಳನ್ನು ರಚಿಸಿದವರಲ್ಲಿ ವೇದವ್ಯಾಸರೇ ಮುಖ್ಯರೂ ವಿಖ್ಯಾತರೂ ಆಗಿದ್ದಾರೆ.

ಕೌರವ ಪಾಂಡವರ ಸಮಸ್ತ ಕಥಾ ಪ್ರಪಂಚವೂ ಇವರಿಗೆ ತಿಳಿದಿತ್ತು. ಭಾರತ ಕಥೆಯಲ್ಲಿ ಈ ಮಹರ್ಷಿಗಳು ಬಹಳ ಸಲ ಕಾಣಿಸಿಕೊಳ್ಳುತ್ತಾರೆ. ಆದ್ಯಂತಗಳಲ್ಲಿಯೂ ಇವರ ಪ್ರವೇಶವಿದೆ. ಭಾರತಯುದ್ಧಾರಂಭದಲ್ಲಿ ಕುರುಡನಾದ ಧೃತರಾಷ್ಟ್ರನಿಗೆ ಯುದ್ಧದ ಪರಿಯನ್ನು ಹೇಳಬೇಕೆಂದು ಸಂಜಯನಿಗೆ ತಿಳಿಸಿ, ಅದೆಲ್ಲವೂ ಕುಳಿತಲ್ಲಿಯೇ ಕಾಣುವಂತೆ ಸಂಜಯನಿಗೆ ದಿವ್ಯದೃಷ್ಟಿಯನ್ನು ಅನುಗ್ರಹಿಸಿದರು.

ಮಹಾಭಾರತವು ಬಹಳ ದೊಡ್ಡಗ್ರಂಥ. ಇಷ್ಟು ವಿಸ್ತಾರವಾದ ಕೃತಿಯು ಜಗತ್ತಿನಲ್ಲಿಯೇ ಇಲ್ಲ. ಇದರಲ್ಲಿ ಒಂದು ಲಕ್ಷ ಶ್ಲೋಕಗಳಿವೆ. ಆದ್ದರಿಂದ ಶತಸಹಸ್ರೀ ಸಂಹಿತಾ ಎಂದು ಹೆಸರು ಬಂದಿದೆ. ಹರಿಶ್ಚಂದ್ರ, ನಳ -ಮೊದಲಾದವರ ಉಪಾಖ್ಯಾನಗಳೂ ವೇದಾಂತ, ರಾಜನೀತಿ, ಲೋಕ-ನೀತಿಗಳೂ ಸೇರಿಕೊಂಡಿವೆ. ಉಪಾಖ್ಯಾನಗಳು ಇಲ್ಲದೆ ಕೇವಲ ಪಾಂಡವ-ಕೌರವರ ಇತಿಹಾಸವು ಇಪ್ಪತ್ತುನಾಲ್ಕು ಸಾವಿರ ಶ್ಲೋಕಗಳನ್ನೊಳಗೊಳ್ಳುತ್ತದೆ. ಭಾರತವೆಂದೂ ಉಪಾಖ್ಯಾನಸಹಿತವಾದ ಲಕ್ಷಶ್ಲೋಕಾತ್ಮಕ ಗ್ರಂಥವನ್ನು ಮಹಾಭಾರತವೆಂದೂ ಹೇಳುತ್ತಾರೆ.

ರಾಮಾಯಣವು ಕೇವಲ ಕಾವ್ಯವೆನಿಸಿದೆ. ಮಹಾಭಾರತವು ಶಾಸ್ತ್ರಕಾವ್ಯ. ಭಗವದ್ಗೀತೆ ಮೊದಲಾದ ಶಾಸ್ತ್ರೀಯ ವಿಷಯವಿರುವುದರಿಂದ ಶಾಸ್ತ್ರವೂ ಹೌದು. ಕಾವ್ಯಲಕ್ಷಣಗಳಿರುವುದರಿಂದ ಕಾವ್ಯವೂ ಹೌದು.

ಸಹೃದಯರಿಗೆ ಅಪೂರ್ವವಾದ ಆನಂದವನ್ನು ಕೊಡುವ ಶಬ್ದಾರ್ಥಗಳಿಂದ ಕೂಡಿದ ಕೃತಿಯು ಕಾವ್ಯ. ರಸ, ಭಾವ, ಅಲಂಕಾರ -ಇವು ಮೂರು ಆನಂದವನ್ನುಂಟುಮಾಡಲು ಮುಖ್ಯಕಾರಣಗಳು. ಇವುಗಳಲ್ಲಿ ರಸಭಾವಗಳು ಅರ್ಥದಲ್ಲಿ ಸೇರಿಹೋಗುತ್ತವೆ. ಅಲಂಕಾರವು ಮಾತ್ರ ಶಬ್ದಾಲಂಕಾರ, ಅರ್ಥಾಲಂಕಾರ ಎಂದು ಎರಡು ಬಗೆಯಾಗಿದೆ. ಉಪಮಾ, ರೂಪಕ, ಉತ್ಪ್ರೇಕ್ಷೆ, ಅರ್ಥಾಂತರನ್ಯಾಸ -ಮೊದಲಾದವು ಅರ್ಥಾಲಂಕಾರಗಳು. ಅನುಪ್ರಾಸ,

ಯಮಕ ಮೊದಲಾದವು ಶಬ್ದಾಲಂಕಾರಗಳು. ಕಾವ್ಯವನ್ನೋದುವಾಗ ಅನುಪ್ರಾಸ, ಯಮಕಗಳೆರಡು ಕಿವಿಗೆ ಹಿತಕರವಾದ ಶಬ್ದಾಲಂಕಾರಗಳು. ಸಾಮಾನ್ಯವಾಗಿ ಕವಿಗಳು ಇವೆರಡನ್ನೇ ವಿಶೇಷವಾಗಿ ಬಳಸುವುದುಂಟು. ಇವಲ್ಲದೆ ಚಕ್ರಬಂಧ, ಮುರಜಬಂಧ, ಗೋಮೂತ್ರಿಕಾ ಬಂಧ -ಮುಂತಾದ ಶಬ್ದಚಿತ್ರಗಳಿವೆ. ಇವು ಕಿವಿಗೆ ಹಿತಕರವಾದವೂ ಅಲ್ಲ. ಈ ಶಬ್ದಚಿತ್ರಗಳಿರುವ ಶ್ಲೋಕಗಳನ್ನು ಅರ್ಥ ಮಾಡಿಕೊಳ್ಳುವುದೂ ಕಷ್ಟ. ಆದ್ದರಿಂದ ಈ ಶಬ್ದರಚನಾ ವೈಚಿತ್ರ್ಯವು ಕಾವ್ಯಕ್ಕೆ ಉಪಕಾರಿಯಲ್ಲ.

ಕವಿಯ ಬುದ್ಧಿಕೌಶಲವನ್ನೂ ಶ್ಲೋಕರಚನಾಸಾಮರ್ಥ್ಯವನ್ನು ಪ್ರತಿಬಿಂಬಿಸತಕ್ಕವು ಇವು. ಇನ್ನು ಪ್ರಹೇಲಿಕಾ, ಸಮಸ್ಯಾಪೂರಣ, ಅಂತರಾಲಾಪ, ಬಹಿರಾಲಾಪ, ಅಕ್ಷರಚ್ಯುತಕ, ಮಾತ್ರಾಚ್ಯುತಕ, ಬಿಂದುಮತೀ ಮೊದಲಾದ ಚಮತ್ಕಾರ ವಿಶೇಷಗಳು ಒಂದು ಬಗೆಯ ಕ್ರೀಡೆಗಳು. ಚದುರಂಗ, ಪಗಡೆಯಾಟ -ಮೊದಲಾದವುಗಳಂತೆ ಶಬ್ದಸಂಪತ್ತುಗಳಿಂದಾಡುವ ಆಟಗಳು. ಈ ವ್ಯಾಸರಹಸ್ಯದಲ್ಲಿ ಬರೆದವುಗಳನ್ನು ಕೂಟಪದ್ಯಗಳೆನ್ನಬಹುದು. ಅಪ್ರಸಿದ್ಧಪದ, ಶ್ಲೇಷ, ವ್ಯಾಕರಣಬಲದಿಂದ ಹೊಸದಾಗಿ ಕಲ್ಪಿಸಿದ ಪದ -ಇತ್ಯಾದಿಗಳ ಬಳಕೆಯಿಂದ ಶ್ರೋತೃವಿಗೆ ಅರ್ಥಮಾಡಿಕೊಳ್ಳಲು ತುಂಬ ಕ್ಲೇಶವನ್ನು ಕೊಡುವ ಪದ್ಯಗಳಿವು. ವಾಚಕರ ಕುತೂಹಲವನ್ನು ತಣಿಸುವುದಕ್ಕಾಗಿ ಕೆಲವನ್ನು ಮಾತ್ರ ಈ ಪುಸ್ತಕದಲ್ಲಿ ನಿರೂಪಿಸಿದ್ದೇನೆ ಈ ಪುಸ್ತಕವನ್ನು ಪ್ರಕಟಿಸಲು ಮುಂದೆ ಬಂದ ಉದಯ ಪ್ರಕಾಶನದ ಶ್ರೀ ಎಂ.ಎಸ್. ಶ್ರೀನಿವಾಸರಾಯರಿಗೆ ನನ್ನ ಹೃತ್ಪೂರ್ವಕ ವಂದನೆಗಳನು ಸಲ್ಲುತ್ತವೆ.

ಬೆಂಗಳೂರು ಎನ್. ರಂಗನಾಥಶರ್ಮಾ

24-2-1999

# ವ್ಯಾಸ ರಹಸ್ಯ

ವೇದವ್ಯಾಸ ಮಹರ್ಷಿಗಳು ಭಾರತವೆಂಬ ಮಹಾಗ್ರಂಥವನ್ನು ವಿರಚಿಸಿರುವರಷ್ಟೆ. ಅವರು ಮೊದಲು ಭಾರತದ ಕಥಾಭಾಗವನ್ನೂ, ಅದನ್ನು ಹೇಗೆ ವಿಸ್ತರಿಸಿ ಸಕಲ ಶಾಸ್ತ್ರಗಳ ಸಾರವನ್ನು ಅದರಲ್ಲಿ ಅಳವಡಿಸಬೇಕೆಂಬುದನ್ನೂ ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡರು. ಈ ಗ್ರಂಥವನ್ನು ಜಗತ್ತಿನಲ್ಲಿ ಯಾವ ರೀತಿಯಲ್ಲಿ ಪ್ರಚಾರಕ್ಕೆ ತರಲಿ? ಅದನ್ನು ಬರೆದುಕೊಳ್ಳುವ ಲೇಖಕನು ಯಾರು? ಎಂಬ ಚಿಂತೆ ಅವರಿಗೆ ಉತ್ಪನ್ನವಾಯಿತು. ಇದನ್ನು ಜ್ಞಾನದೃಷ್ಟಿಯಿಂದ ಅರಿತ ಬ್ರಹ್ಮದೇವನು ಲೋಕಹಿತಕ್ಕಾಗಿ ವೇದವ್ಯಾಸರಿಗೆ ಪ್ರತ್ಯಕ್ಷನಾದನು. ವ್ಯಾಸರು ತಮ್ಮ ಚಿಂತೆಯನ್ನು ತಿಳಿಸಲಾಗಿ ಬ್ರಹ್ಮದೇವನು ''ಮಹರ್ಷಿಯೆ, ಈ ಭಾರತ ಕಾವ್ಯವನ್ನು ಬರೆಯಲು ಗಣೇಶನೇ ಸಮರ್ಥನು. ಆ ದೇವನನ್ನು ಸ್ಮರಿಸಿಕೊ'' ಎಂದು ಹೇಳಿ ತನ್ನ ಲೋಕಕ್ಕೆ ಹೊರಟುಹೋದನು.

ಅನಂತರ ವ್ಯಾಸಮಹರ್ಷಿಗಳು ಗಣೇಶನನ್ನು ಭಕ್ತಿಯಿಂದ ಸ್ತುತಿಸಿದರು. ಗಣೇಶನು ಪ್ರತ್ಯಕ್ಷನಾದನು. ಸಕಲಸತ್ಕಾರಗಳಿಂದ ಗಣೇಶನನ್ನು ಪೂಜಿಸಿ ತಮ್ಮ ಅಭೀಷ್ಟವನ್ನು ವ್ಯಾಸರು ಅರುಹಿದರು. ವ್ಯಾಸರ ಪ್ರಾರ್ಥನೆಯನ್ನು ಮೀರಲಾರದೆ ಗಣೇಶನಿಗೆ ಕಷ್ಟಕ್ಕೆ ಇಟ್ಟುಕೊಂಡಿತು. ಒಂದು ಉಪಾಯವನ್ನು ಹೂಡಿದನು. ''ಆಗಬಹುದು ವ್ಯಾಸರೆ, ಆದರೆ ಒಂದು ನಿಯಮವುಂಟು. ನಾನು ಬರೆಯುವಷ್ಟು ಶೀಘ್ರವಾಗಿ ನೀವು ಭಾರತವನ್ನು ಹೇಳುತ್ತಾ ಹೋಗಬೇಕು. ಬರೆಯಲು ಕುಳಿತಾಗ ನನ್ನ ಲೇಖನಿಗೆ ಒಂದು ಕ್ಷಣಕಾಲವೂ ಬಿಡುವು ದೊರೆಯಬಾರದು. ಹಾಗಾದರೆ ಮಾತ್ರ ನಾನು ಲೇಖಕನಾಗಲು ಸಮ್ಮತಿಸುತ್ತೇನೆ'' ಎಂದು ಹೇಳಿದನು ! ಈ ಮಾತಿಗೆ ವ್ಯಾಸರು ಹೇಳಿದ್ದೇನೆಂದರೆ, ''ದೇವ, ಹಾಗೆಯೇ ಆಗಲಿ. ಆದರೆ ನಾನು ಹೇಳುವ ಶ್ಲೋಕಗಳಿಗೆ ಸರಿಯಾಗಿ ಅರ್ಥವನ್ನು ಮಾಡಿಕೊಳ್ಳದೆ ನೀನು ಏನನ್ನೂ ಬರೆಯಕೂಡದು !''

ಗಣೇಶನು ಆಗಲೆಂದು ಒಪ್ಪಿ ಲೇಖನಿಯನ್ನು ಹಿಡಿದು ಕುಳಿತನು. ವ್ಯಾಸರು ಭಾರತವನ್ನು ಹೇಳತೊಡಗಿದರು.

ಭಾರತವೇನು ಸಾಮಾನ್ಯ ಗ್ರಂಥವೆ? ಅದರ ವಿರಚನೆಗೆ ಎಂತಹ ಪ್ರಣಿಧಾನಬೇಕು ? ದೊರಕಿರುವ ಶೀಘ್ರಲಿಪಿಕಾರನೋ ದಿವ್ಯಪುರುಷ. ಅಸಾಧಾರಣವಾದ ವ್ಯಾಸರ ಪ್ರತಿಭೆಗೆ ಯಾವುದೂ ಅಗಾಧವಲ್ಲ. ಭಾರತವನ್ನು ಧಾರಾವಾಹಿಯಾಗಿ ಹೇಳುತ್ತಾ ಅಲ್ಲಲ್ಲಿ ಕೆಲವು ಕೂಟಶ್ಲೋಕಗಳನ್ನು ಹೇಳುತ್ತಾ ಹೋದರು. ಈ ಗ್ರಂಥಗ್ರಂಥಿಗಳು ಬಿಗಿಯಾಗಿದ್ದುದರಿಂದ ಅರ್ಥವನ್ನು ಬಿಡಿಸಿ ತಿಳಿದುಕೊಳ್ಳಲು ಗಣೇಶನಿಗೆ ಕೆಲವು ನಿಮಿಷ ತಡವರಿಸಬೇಕಾಗುತ್ತಿತ್ತು. ಈ ಸಮಯದಲ್ಲಿ ವ್ಯಾಸರು ಮುಂದೆ ಹೇಳಬೇಕಾದ ವಿಷಯಗಳನ್ನು ಮನಸ್ಸಿನಲ್ಲಿ ಗುಣಿಸಿಕೊಳ್ಳುತ್ತಿದ್ದರು. ಹೀಗೆ ಲಕ್ಷ ಶ್ಲೋಕಾತ್ಮಕವಾದ ಮಹಾಭಾರತದ ನಿರ್ಮಾಣವಾಯಿತು.

ಭಾರತದಲ್ಲಿ ಇಂತಹ 8,800 ಕೂಟಶ್ಲೋಕಗಳಿವೆಯಂತೆ. ಇವುಗಳ ವಿಷಯದಲ್ಲಿ ಸೂತಪುತ್ರರಾದ ಉಗ್ರಶ್ರವಸ್ಸರು ಹೇಳುವುದೇನೆಂದರೆ-

**ಅಹಂ ವೇದ್ಮಿ ಶುಕೋ ವೇತ್ತಿ ಸಂಜಯೋ ವೇತ್ತಿವಾ ನ ವಾ ॥**

''ಈ ಶ್ಲೋಕಗಳ ಅರ್ಥವನ್ನು ನಾನು ಬಲ್ಲೆನು; ಶುಕರೂ ಬಲ್ಲರು. ಸಂಜಯನಿಗೆ ಗೊತ್ತಿದೆಯೋ ಇಲ್ಲವೋ !''

ಸರ್ವಜ್ಞನಾದ ಗಣೇಶನೂ ಅರ್ಥವೇನಿರಬಹುದೆಂದು ಆಲೋಚಿಸುತ್ತಾ ಕ್ಷಣಕಾಲ ಕುಳಿತಿರಬೇಕಾಯಿತೆಂದರೆ, ಉಳಿದವರ ಪಾಡನ್ನು ಹೇಳ-ಬೇಕಾದ್ದೇನಿದೆ ? ಇವುಗಳಿಗೆ 'ವ್ಯಾಸಗುಟ್ಟು' ಎಂದು ಪ್ರಸಿದ್ಧಿ ಇದೆ.

ವ್ಯಾಖ್ಯಾನಕಾರರು ಅಲ್ಲಲ್ಲಿ ಇವುಗಳನ್ನು ಗುರುತಿಸಿ ಯಥಾಶಕ್ತಿಯಾಗಿ ಅರ್ಥವನ್ನು ಹೇಳಿದ್ದಾರೆ. ಅವುಗಳಲ್ಲಿ ಕೆಲವನ್ನು ಕನ್ನಡಿಗರಿಗೆ ಪರಿಚಯ ಮಾಡಿಸಿಕೊಡಬೇಕೆಂದು ಇಲ್ಲಿ ಪ್ರಯತ್ನಿಸಲಾಗಿದೆ.

ಉಪಮನ್ಯುವು ಅಶ್ವಿನೀದೇವತೆಗಳನ್ನುದ್ದೇಶಿಸಿ ಮಾಡಿದ ಸ್ತೋತ್ರವಿದು-

**ಮುಖೇನ ಗರ್ಭಂ ಲಭೇತಾಂ ಯುವಾನೌ ।**
**ಗತಾಸುರೇತತ್ ಪ್ರಪದೇನ ಸೂತೇ ॥**
**ಸದ್ಯೋಜಾತೋ ಮಾತರಮತ್ತಿ ಗರ್ಭಃ ।**
**ತಾವಶ್ವಿನೌ ಮುಂಚಥೋ ಜೀವಸೇ ಗಾಃ ॥** (ಆದಿಪರ್ವ ೩-೬೭)

ಇದರ ಅರ್ಥವು ಯಥಾಶ್ರುತವಾಗಿ ಹೀಗಾಗಬಹುದು-

''ಇಬ್ಬರು ಯುವಕರು ಮುಖದಿಂದ ಗರ್ಭವನ್ನು ಧರಿಸಿದರು. ಮೃತನು ಇದನ್ನು ಪಾದತಲದಿಂದ ಹಡೆಯುತ್ತಾನೆ. ಹುಟ್ಟಿದ ಕೂಡಲೇ ಗರ್ಭವು ತಾಯಿಯನ್ನು ತಿಂದುಬಿಡುತ್ತದೆ. ಅಶ್ವಿನೀದೇವತೆಗಳೇ, ನೀವು ಜೀವನಕ್ಕಾಗಿ ಹಸುಗಳನ್ನು ಬಿಡುತ್ತೀರಿ !''

ಈ ಅರ್ಥವು ಅನನ್ವಿತವೂ ವಿಚಿತ್ರವೂ ಆಗಿ ತೋರುತ್ತದೆ. ಸ್ತೋತ್ರದ ವಾಸ್ತವಾರ್ಥವೇನೆಂದರೆ :-

ಯುವಾನೌ- ಯುವಕ ಯುವತಿಯರು, ಮುಖೇನ- ಬಾಯಿಯಿಂದ, ಗರ್ಭಂ- ಗರ್ಭಕ್ಕೆ ಕಾರಣವಾದ ಅನ್ನವನ್ನು, ಲಭೇತಾಂ- ಪಡೆಯುತ್ತಾರೆ. ಅನಂತರ, ಗತಾಸುಃ- ಅಚೇತನವಾದ ದೇಹವು, ಏತತ್- ಈ ಗರ್ಭವನ್ನು, ಪ್ರಪದೇನ- ಯೋನಿದ್ವಾರಾ, ಸೂತೇ- ಪ್ರಸವಿಸುತ್ತದೆ. ಸದ್ಯೋಜಾತಃ- ಆಗ ತಾನೇ ಹುಟ್ಟಿದ, ಗರ್ಭಃ- ಶಿಶುವು, ಮಾತರಂ- ತಾಯಿಯ ಸ್ತನ್ಯವನ್ನು, ಅತ್ತಿ- ಪಾನಮಾಡುತ್ತದೆ. ತೌ- ಚೇತನರೂಪವಾದ ಬ್ರಹ್ಮವಸ್ತುವೇ, ಅಶ್ವಿನೌ- ಅಶ್ವಿನೀ ದೇವತೆಗಳಾಗಿ (ಸ್ತಃ- ಇದ್ದೀರಿ) ಜೀವಸೇ- ನನ್ನ ಜೀವನದ ನಿರ್ವಾಹ- ಕ್ಕಾಗಿ, ಗಾಃ- ಕಣ್ಣುಗಳನ್ನು, ಮುಂಚಥಃ- ದಯಾಪಾಲಿಸಿರಿ.

ಟಿಪ್ಪಣಿ :- ಅನ್ನವು ಶುಕ್ಲಶೋಣಿತ ರೂಪವನ್ನು ಹೊಂದಿ ಗರ್ಭವಾಗಿ ಪರಿಣಮಿಸುತ್ತದೆ. 'ಅನ್ನಾತ್ ಪುರುಷಃ' ಎಂದು ಶ್ರುತಿಯು ಬೋಧಿಸುತ್ತದೆ. ಆದ್ದರಿಂದ ಅನ್ನವನ್ನು ಗರ್ಭವೆಂದು ಕರೆದಿದ್ದಾರೆ. ಶಿಶುವಿಗೆ ಸ್ತನ್ಯಪಾನ ಮಾಡ- ಬೇಕೆಂದು ಯಾರು ಹೇಳಿಕೊಡುತ್ತಾರೆ ? ಅದಕ್ಕೆ ಜನ್ಮಾಂತರ ಸಂಸ್ಕಾರವೇ ಕಾರಣವೆಂದು ಒಪ್ಪಬೇಕಾಗುತ್ತದೆ. ಆ ಸಂಸ್ಕಾರವು ಈ ಶರೀರಕ್ಕಲ್ಲ. ಆದ್ದರಿಂದ ಈ ಶರೀರಗಳಲ್ಲಿ ಅನುಸ್ಯೂತನಾದ ಆತ್ಮನಿರುವನೆಂದು ಸಿದ್ಧವಾಗುತ್ತದೆ. ಜೀವಾತ್ಮನು ಶರೀರವನ್ನು ಸ್ತನ್ಯಪಾನ ಮಾಡುವಂತೆ ಪ್ರೇರಿಸುತ್ತಾನೆ.

ಉಪಮನ್ಯು ಕುರುಡನಾದಾಗ ಗುರೂಪದೇಶದಂತೆ ಕಣ್ಣುಗಳನ್ನು ಪಡೆ- ಯುವುದಕ್ಕಾಗಿ ಅಶ್ವಿನೀ ದೇವತೆಗಳನ್ನು ಹೀಗೆ ಪ್ರಾರ್ಥಿಸಿದ್ದಾನೆ.

ಆದಿಪರ್ವದಲ್ಲಿ ಒಂದೆಡೆ ಅಷ್ಟಕ ಮತ್ತು ಯಯಾತಿಗಳ ಸಂವಾದ ಬರುತ್ತದೆ. ಅಷ್ಟಕನು ಯಯಾತಿಯನ್ನು ಕುರಿತು ಮೋಕ್ಷಾಪೇಕ್ಷಿಯೂ, ಪೂಜಾರ್ಹನೂ ಆದ ಮುನಿಯ ಲಕ್ಷಣವೇನೆಂದು ಕೇಳುತ್ತಾನೆ. ಅದಕ್ಕೆ ಯಯಾತಿಯು ಹೇಳುವುದೇನೆಂದರೆ :-

**ಧೌತದಂತಂ ಕೃತ್ತನಖಂ ಸದಾಸ್ನಾತಮಲಂಕೃತಂ ।**
**ಅಸಿತಂ ಸಿತಕರ್ಮಾಣಂ ಕಸ್ತಮರ್ಹತಿ ನಾರ್ಚಿತುಂ ॥** (ಆದಿ. ೯೨-೧೫)

ಆಪಾತವಾಗಿ ತೋರುವ ಅರ್ಥ : ಹಲ್ಲುಗಳನ್ನುಜ್ಜಿಕೊಂಡು, ಉಗುರು-ಗಳನ್ನು ಕತ್ತರಿಸಿಕೊಂಡು, ಯಾವಾಗಲೂ ಸ್ನಾನಮಾಡಿ ಅಲಂಕರಿಸಿಕೊಂಡಿರು-ವವನೂ, ಕಪ್ಪುಬಣ್ಣದವನಾಗಿ ಬಿಳಿಯ ಕೆಲಸವನ್ನು ಮಾಡತಕ್ಕವನೂ ಆದ ಮನುಷ್ಯನು ಮುನಿ ಎನಿಸಿಕೊಳ್ಳುವನು. ಅವನನ್ನು ಯಾರು ತಾನೇ ಪೂಜಿಸುವುದಿಲ್ಲ ?

ತಾತ್ತ್ವಿಕವಾದ ಅರ್ಥ : ಧೌತದಂತನೆಂದರೆ ಶುದ್ಧವಾದ ಆಹಾರವನ್ನು ಸ್ವೀಕರಿಸತಕ್ಕವನು. 'ಆಹಾರ ಶುದ್ಧೌ ಸತ್ತ್ವ ಶುದ್ಧಿಃ' ಎಂದು ವಚನವಿರುವುದ-ರಿಂದ ಪರಿಶುದ್ಧವಾದ ಆಹಾರದಿಂದ ಮನುಷ್ಯನ ಅಂತಃಕರಣವು ರಾಗಾದಿ-ದೋಷರಹಿತವಾಗಿ ನಿರ್ಮಲವಾಗುತ್ತದೆ. ಕೃತ್ತನಖನೆಂದರೆ ಅಹಿಂಸಾತತ್ಪರ-ನೆಂದು ಅರ್ಥ. ನಖವೆಂದರೆ ಹಿಂಸೆ ಮಾಡುವ ಸಲಕರಣೆ. ಅದನ್ನು ತ್ಯಜಿಸಿದವನು ಕೃತ್ತನಖ. ಸದಾಸ್ನಾತನೆಂದರೆ ಮನೋವಾಕ್ಕಾಯಗಳಿಂದ ಪರಿಶುದ್ಧನಾದವನು. ಅಲಂಕಾರವೆಂದರೆ ಹ್ಯಾಟು, ಬೂಟುಗಳಲ್ಲ. ಶಮ-ದಮಾದಿ ಗುಣಗಳೇ ಅಲಂಕಾರಗಳು. ಮುನಿಯು ಈ ಗುಣಗಳಿಂದ ಭೂಷಿತ-ನಾಗಿರಬೇಕು. 'ಸಿತ' ಎಂದರೆ ಬಂಧನ, ಕಟ್ಟು. ಜನ್ಮಾಂತರದ ವಾಸನೆಗಳೇ ಬಂಧನಗಳು. ಅವುಗಳಿಲ್ಲದವನು ಅಸಿತ. ಸಿತಕರ್ಮನೆಂದರೆ ನಿರ್ದೋಷವಾದ ಕರ್ಮವನ್ನು ಮಾಡತಕ್ಕವನು. ಈ ರೀತಿಯಲ್ಲಿರುವವನೇ ಮುನಿ. ಅವನನ್ನು ಯಾರು ತಾನೇ ಪೂಜಿಸುವುದಿಲ್ಲ ?

ಪಾಂಡವರು ವೀರರೂ, ತೇಜಸ್ವಿಗಳೂ ಆಗಿರುವುದು ಧೃತರಾಷ್ಟ್ರನಿಗೆ ಸಹಿಸಲಿಲ್ಲ. ಅವನು ರಾಜಶಾಸ್ತ್ರವಿಶಾರದನಾದ ಕಣಿಕ ಎಂಬ ಮಂತ್ರಿಯನ್ನು

ಕರೆಸಿ ತಾನು ಮಾಡಬೇಕಾದ ಕರ್ತವ್ಯವೇನೆಂದರೆ ವಿಚಾರಿಸಿದನು. ಆಗ ಕಣಿಕನು ರಾಜನೀತಿಯನ್ನು ವಿವರಿಸುವಾಗ ಈ ಶ್ಲೋಕವನ್ನು ಹೇಳುತ್ತಾನೆ.

**ಸುಪುಷ್ಪಿತಃ ಸ್ಯಾದಫಲಃ ಫಲವಾನ್ ಸ್ಯಾದ್ದುರಾರುಹಃ ।**
**ಆಮಃಸ್ಯಾತ್ ಪಕ್ವಸಂಕಾಶೋ ನಚ ಜೀರ್ಯೇತ ಕರ್ಹಿಚಿತ್ ॥**

(ಆದಿ. ೧೪೦-೬೮)

ಆಪಾತವಾಗಿ ತೋರುವ ಅರ್ಥ : ರಾಜನು ವೃಕ್ಷದಂತೆ ಇರಬೇಕು. ಆ ವೃಕ್ಷದಲ್ಲಿ ಚೆನ್ನಾಗಿ ಹೂ ಬಿಡಬೇಕು. ಹಣ್ಣು ಬಿಡಬಾರದು. ಹಣ್ಣು ಬಿಟ್ಟರೂ ಹತ್ತಲು ಅಸಾಧ್ಯವಾಗಿರಬೇಕು. ಮಾಗಿರುವ ಹಣ್ಣಿನಂತೆ ಕಂಡರೂ ಅದು ಕಾಯಿಯಾಗಿಯೇ ಇರಬೇಕು. ಆ ವೃಕ್ಷವು ಮುದಿಯಾಗಲೇಬಾರದು.

ತಾತ್ತ್ವಿಕವಾದ ಅರ್ಥ : ಸುಪುಷ್ಪಿತಃ ಸ್ಯಾತ್ ಬರಿಯ ಮಾತುಗಳಿಂದಲೇ ಜನರಿಗೆ ಆಸೆಯನ್ನು ಹುಟ್ಟಿಸುತ್ತಿರಬೇಕು. ಅಫಲಃ-ಫಲವನ್ನುಂಟುಮಾಡ-ಬಾರದು. ದುರಾರುಹಃ ಫಲವಾನ್ ಸ್ಯಾತ್-ಫಲವನ್ನು ತೋರಿಸಿದರೂ ಅದು ದೊರಕದಂತೆ ವಿಘ್ನವನ್ನೊಡ್ಡುತ್ತಿರಬೇಕು. ಆಮಃ ಸ್ಯಾತ್ ಪಕ್ವಸಂಕಾಶಃ-ತೋರಿಸಿದ ಫಲವೂ ಮೇಲೆ ನೋಡಲು ಚೆನ್ನಾಗಿದ್ದು ನಿಜವಾಗಿ ಹುರುಳಿಲ್ಲ-ದ್ದಾಗಿರಬೇಕು. ನಚ ಜೀರ್ಯೇತ ಕರ್ಹಿಚಿತ್-ಅವನ ಉತ್ಸಾಹ ಶಕ್ತಿಯು ಯಾವಾಗಲೂ ಕುಗ್ಗಬಾರದು.



ಪಾಂಡವರ ಅಭ್ಯುದಯವನ್ನೂ, ಪ್ರಜಾವಿಶ್ವಾಸವನ್ನೂ ಕೌರವರು ಸೈರಿಸಲಿಲ್ಲ. ಪಾಂಡವರನ್ನು ಹೇಗಾದರೂ ಮೊದಲು ರಾಜಧಾನಿಯಿಂದ ಹೊರಡಿಸಬೇಕೆಂದು ಯೋಚಿಸಿದರು. ಅವರನ್ನು ರಾಜಧಾನಿಗೆ ದೂರ-ದಲ್ಲಿರುವ ವಾರಣಾವತಕ್ಕೆ ಕಳಿಸಿ ಅಲ್ಲಿಯೇ ನೆಲಸುವಂತೆ ಮಾಡಬೇಕೆಂದು ದುರ್ಯೋಧನನು ಧೃತರಾಷ್ಟ್ರನಿಗೆ ಗಂಟುಬಿದ್ದನು. ಧೃತರಾಷ್ಟ್ರನು ಧರ್ಮರಾಯನನ್ನು ಕರೆಸಿ ''ನೀವು ಐವರೂ ತಾಯಿಯಾದ ಕುಂತಿಯೊಡನೆ ಕೆಲವು ಕಾಲ ವಾರಣಾವತಕ್ಕೆ ಹೋಗಿ ವಾಸಮಾಡಿರಿ'' ಎಂದು ಉಪಾಯವಾಗಿ ತಿಳಿಸಿದನು. ಪಾಂಡವರು ಅಲ್ಲಿಗೆ ಹೋಗಲು ಸಿದ್ಧರಾದರು.

ದುರ್ಯೋಧನನು ವಾರಣಾವತದಲ್ಲಿ ಪುರೋಚನನ ಮೂಲಕ ಒಂದು ಅರಗಿನ ಅರಮನೆಯನ್ನು ಕಟ್ಟಿಸಿದ್ದನು. ಪಾಂಡವರು ಅದರಲ್ಲಿ ವಾಸವಾಗಿರಬೇಕೆಂದೂ, ಒಂದು ರಾತ್ರಿ ಅರಮನೆಗೆ ಬೆಂಕಿಯನ್ನು ಹೊತ್ತಿಸಿ ಅವರನ್ನೆಲ್ಲಾ ನಾಶಗೊಳಿಸಬೇಕೆಂದೂ ಅವನ ಕಪಟತಂತ್ರ. ಪುರೋಚನನಿಗೆ ಈ ಕೆಲಸವನ್ನೆಲ್ಲಾ ಗುಟ್ಟಾಗಿ ನಡೆಸಬೇಕೆಂದು ವಹಿಸಿಕೊಟ್ಟಿದ್ದನು.

ಈ ಗುಟ್ಟು ಹೇಗೋ ವಿದುರನಿಗೆ ತಿಳಿದುಹೋಯಿತು. ರಾಜಧಾನಿಯಿಂದ ಪಾಂಡವರನ್ನು ಬೀಳ್ಕೊಡುವಾಗ ಧರ್ಮರಾಜನಿಗೆ ಈ ಬಗೆಗೆ ಎಚ್ಚರಿಕೆ ಕೊಟ್ಟನು. ಈ ಎಚ್ಚರಿಕೆ ಅನ್ಯರಿಗೆ ತಿಳಿಯದೆ ಧರ್ಮರಾಜನಿಗೆ ಮಾತ್ರ ತಿಳಿಯುವಂತೆ ರಹಸ್ಯ ಭಾಷೆಯಲ್ಲಿತ್ತು.

**ಬೋಧಯನ್ ಪಾಂಡವಶ್ರೇಷ್ಠಮಿದಂ ವಚನಮಬ್ರವೀತ್ ।**
**ಪ್ರಾಜ್ಞಃ ಪ್ರಾಜ್ಞಪ್ರಲಾಪಜ್ಞಃ ಪ್ರಲಾಪಜ್ಞಮಿದಂ ವಚಃ ॥** (ಆದಿ. ೧೪೫-೨೦)

ಅರ್ಥ : ಪ್ರಾಜ್ಞನೂ ಪ್ರಾಜ್ಞರ ಪ್ರಲಾಪವನ್ನು ಬಲ್ಲವನೂ ಆದ ವಿದುರನು ಪ್ರಲಾಪಜ್ಞನೂ, ಪಾಂಡವರಲ್ಲಿ ಹಿರಿಯನೂ ಆದ ಧರ್ಮರಾಜನಿಗೆ ದುರ್ಯೋಧನನ ಕಪಟ ತಂತ್ರವನ್ನು ತಿಳಿಸುವುದಕ್ಕಾಗಿ ಈ ಮಾತನ್ನು ಹೇಳಿದನು.

ಈ ಶ್ಲೋಕದ ಅರ್ಥವೂ ಕ್ಲಿಷ್ಟವಾಗಿದೆ. ಪ್ರಲಾಪವೆಂದರೆ ಅರ್ಥ ಶೂನ್ಯವಾದ ಮಾತು. ಪ್ರಾಜ್ಞರ ಪ್ರಲಾಪವೆಂದರೇನು ? ಪ್ರಾಜ್ಞರು ಅರ್ಥಶೂನ್ಯವಾದ ಮಾತನ್ನಾಡುವರೆ ? ಧರ್ಮರಾಜನನ್ನು ಪ್ರಲಾಪಜ್ಞನೆನ್ನುವುದೂ ಸರಿಯಲ್ಲ. ಅರ್ಥಶೂನ್ಯವಾದ ಮಾತಿನಲ್ಲಿ ತಿಳಿದುಕೊಳ್ಳಬೇಕಾದ ಅರ್ಥವಾದರೂ ಏನಿದ್ದೀತು ?

ವಾಸ್ತವಾರ್ಥವೇನೆಂದರೆ :- ವಿದುರನು ಪ್ರಾಜ್ಞ- ಅನೇಕ ಭಾಷೆಗಳನ್ನು ಬಲ್ಲ ವಿದ್ವಾಂಸ. ಅವನು ''ಪ್ರಾಜ್ಞಪ್ರಲಾಪ''ವನ್ನು ಬಲ್ಲವನು. ಇಲ್ಲಿ ಪ್ರ+ ಅಜ್ಞ- ಪ್ರಾಜ್ಞನೆಂದು ಸಂಧಿ ಮಾಡತಕ್ಕದ್ದು. ಪ್ರಾಜ್ಞರೆಂದರೆ ಬಹಳ ಅಜ್ಞಾನಿಗಳು. ವೇದಾರ್ಥವನ್ನರಿಯದ ಮ್ಲೇಂಛರು. ಅವರ ಭಾಷೆಯೇ ಪ್ರಲಾಪ. ಅದು ಅಪಭ್ರಂಶವಾಗಿದ್ದು ಶಾಸ್ತ್ರೀಯವಾದ ರೀತಿಯಲ್ಲಿ ಅರ್ಥಶೂನ್ಯ. ಧರ್ಮರಾಜನು ಮ್ಲೇಂಛಭಾಷಾಭಿಜ್ಞನಾದ್ದರಿಂದ ಅವನು ''ಪ್ರಲಾಪಜ್ಞ''.

ವಿದುರನು ಮ್ಲೇಂಛಭಾಷೆಯಲ್ಲಿಯೇ ಮಾತನಾಡಿದನು. ವ್ಯಾಸಮುನಿಗಳು ಅದಕ್ಕೆ ಅನುಗುಣವಾದ ಶೈಲಿಯಿಂದ ಸಂಸ್ಕೃತಕ್ಕೆ ಪರಿವರ್ತಿಸಿದರು.

ವಿದುರನಾಡಿದ ಕೆಲವು ಮಾತುಗಳಿವು-

**ಅಲೋಹಂ ನಿಶಿತಂ ಶಸ್ತ್ರಂ ಶರೀರಪರಿಕರ್ತನಂ ।**
**ಯೋ ವೇತ್ತಿ ನ ತು ತಂ ಘ್ನಂತಿ ಪ್ರತಿಘಾತವಿದಂ ದ್ವಿಷಃ ॥** (ಆದಿ. ೧೪೫-೨೨)

ಆಪಾತವಾದ ಅರ್ಥ : ಲೋಹನಿರ್ಮಿತವಾಗದೆ ಹರಿತವೂ, ಶರೀರವನ್ನು ಕತ್ತರಿಸತಕ್ಕದ್ದೂ ಆದ ಶಸ್ತ್ರವನ್ನು ಯಾರು ತಿಳಿದಿರುವನೋ, ಪ್ರತಿ ಹಿಂಸೆಯನ್ನು ಬಲ್ಲ ಆತನನ್ನು ಶತ್ರುಗಳು ಕೊಲ್ಲಲಾರರು.

ಮ್ಲೇಂಛ ಭಾಷೆ ಸಂಸ್ಕೃತದಿಂದ ಹುಟ್ಟಿದ ದೇಶಭಾಷೆ. ಸಂಸ್ಕೃತ ಶಬ್ದದ ಅನೇಕ ವರ್ಣಗಳು ಅದರಲ್ಲಿ ವಿಕಾರ ಹೊಂದಿರುತ್ತವೆ. ಮೂಲ ವರ್ಣಗಳಿಗೆ ಲೋಪವೋ, ಆಗಮವೋ, ಆದೇಶವೋ ಬಂದಿರಬಹುದು. ವಾಸ್ತವಾರ್ಥ-ವನ್ನು ಗ್ರಹಿಸುವಾಗ ಈ ಅಂಶವನ್ನು ಗಮನದಲ್ಲಿಟ್ಟಿರಬೇಕು.

ವಾಸ್ತವಾರ್ಥ : ತಂ- ಆ ವಾರಣಾವತದಲ್ಲಿರುವ, ಶಸ್ತ್ರಂ- ಮನೆಯನ್ನು, ಅಲ -ಅಗ್ನಿಯಿಂದ ಸುಡುವ ಅರಗು ಮುಂತಾದ ವಸ್ತುಗಳ, ಊಹಂ- ಸಮುದಾಯವೆಂದೂ, ಶರೀರ ಪರಿ- ತನ್ನ ಸ್ವರೂಪವನ್ನು ಮರೆಸಿಕೊಂಡಿದ್ದು, ನಿಶಿ- ರಾತ್ರಿಯಲ್ಲಿ, ಕರ್ತನಂ- ಹಿಂಸೆ ಮಾಡುತ್ತದೆಯೆಂದೂ, ಯಃ- ಯಾರು; ವೇತ್ತಿ- ತಿಳಿಯುವನೋ, ಪ್ರತಿಘಾತವಿದಂ- ಪ್ರತೀಕಾರವನ್ನು ಬಲ್ಲ, ತಂ- ಅವನನ್ನು, ದ್ವಿಷಃ- ಶತ್ರುಗಳು, ನ ಘ್ನಂತಿ- ಕೊಲ್ಲಲಾರರು.

ವಿ.ಸೂ.:- ಮನೆಯೆಂಬ ಅರ್ಥವಿರುವ ಸಂಸ್ಕೃತದ 'ಸಸ್ತ್ರ' ಶಬ್ದವು ದೇಶ-ಭಾಷೆಯಲ್ಲಿ 'ಶಸ್ತ್ರ'ವಾಗಿದೆ. ಅನಲ ಶಬ್ದ 'ಅಲ'ವಾಗಿದೆ. 'ಶರೀರ' ಎಂಬಲ್ಲಿ ದ್ವಿತೀಯಾ ವಿಭಕ್ತಿ ಇಲ್ಲ. 'ನಿಶಿತಂ' ಎಂಬಲ್ಲಿ ನಿಶಿ ತಂ ಎಂದು ಪದಚ್ಛೇದ ಮಾಡಿ ಎರಡು ಪದಗಳನ್ನು ಮಾಡಿಕೊಳ್ಳತಕ್ಕದ್ದು.

**ಕಕ್ಷಘ್ನಃ ಶಿಶಿರಘ್ನಶ್ಚ ಮಹಾಕಕ್ಷೇ ಬಿಲೌಕಸಃ ।**
**ನ ದಹೇದಿತಿ ಚಾತ್ಮಾನಂ ಯೋ ರಕ್ಷತಿ ಸ ಜೀವತಿ ॥** (ಆದಿ. ೧೪೫-೨೩)

ಆಪಾತವಾಗಿ ತೋರುವ ಅರ್ಥ : ಕಕ್ಷಘ್ನಃ- ಒಣ ಹುಲ್ಲನ್ನು ಸುಡತಕ್ಕ-ವನೂ, ಶಿಶಿರಘ್ನಃ- ಚಳಿಯನ್ನು ಹೋಗಲಾಡಿಸತಕ್ಕವನೂ, ಮಹಾಕಕ್ಷೇ- ದೊಡ್ಡ ಅರಣ್ಯದಲ್ಲಿ, ಬಿಲೌಕಸಃ- ಸರ್ಪಗಳನ್ನು, ನ ದಹೇತ್- ಸುಡುವುದಿಲ್ಲ, ಇತಿ- ಹೀಗೆಂದು, ಯಃ- ಯಾರು, ಆತ್ಮಾನಂ- ತನ್ನನ್ನು, ರಕ್ಷತಿ- ರಕ್ಷಿಸಿಕೊಳ್ಳುವನೋ, ಸಃ- ಅವನು, ಜೀವತಿ- ಬದುಕುತ್ತಾನೆ.

ಮೇಲ್ಕಂಡ ಅರ್ಥವನ್ನಿಟ್ಟುಕೊಂಡರೆ ಶ್ಲೋಕದ ತಾತ್ಪರ್ಯವೇನೆಂಬುದೇ ತಿಳಿಯುವುದಿಲ್ಲ.

ವಾಸ್ತವಾರ್ಥ : ಕಕ್ಷಘ್ನಃ- ಬಳಿಯಲ್ಲಿ ತಿರುಗಾಡುತ್ತಿರುವ ಪುರೋಚನನು, ಶಿಶಿರಘ್ನಃ- ಅಗ್ನಿಯಿಂದ ನಿಮ್ಮನ್ನು ಕೊಲ್ಲತಕ್ಕವನಾಗಿದ್ದಾನೆ. ಮಹಾಕಕ್ಷೇ- ಪ್ರಬಲನಾದ ಶತ್ರು- ವಿರುವಾಗ, ಬಿಲೌಕಸಃ- ಸುರಂಗ ಮಾರ್ಗದಲ್ಲಿ ಇರತಕ್ಕ ನಿಮ್ಮನ್ನು, ಅವನು, ನ ದಹೇತ್- ಸುಡಲಾರನು, ಇತಿ ಚಾತ್ಮಾನಂ ಯೋ ರಕ್ಷತಿ ಸ ಜೀವತಿ- ಹೀಗೆ ಯಾರು ತನ್ನನ್ನು ರಕ್ಷಿಸಿಕೊಳ್ಳುತ್ತಾನೋ ಅವನು ಬದುಕುತ್ತಾನೆ.

ತಾತ್ಪರ್ಯ : ಆಪ್ತನಂತೆ ನಟಿಸುವ ಈ ಪುರೋಚನನು ಜತುಗೃಹಕ್ಕೆ ಬೆಂಕಿಯನ್ನಿಡುತ್ತಾನೆ. ಈಗ ಕೌರವರು ಬಲಶಾಲಿಗಳಾಗಿರುವುದರಿಂದ ಅವರ ಮೇಲೆ ಯುದ್ಧ ಮಾಡುವುದಕ್ಕೆ ಇದು ಸಮಯವಲ್ಲ. ಸುರಂಗವನ್ನು ರಹಸ್ಯ-ವಾಗಿ ನಿರ್ಮಿಸಿ ಅದರ ಮೂಲಕ ನೀವು ತಪ್ಪಿಸಿಕೊಂಡು ಹೋಗಬೇಕು. ಬದುಕಿಕೊಳ್ಳಲು ಇದೊಂದೇ ದಾರಿ.

ಟಿಪ್ಪಣಿ : ಕಕ್ಷಘ್ನಃ ಎಂಬಲ್ಲಿ 'ಘ್ನ' ಶಬ್ದವು 'ಹನ್' ಧಾತುವಿನಿಂದ ಹುಟ್ಟಿದೆ. ಈ ಧಾತುವಿಗೆ ಹಿಂಸೆ, ಗತಿ ಎಂಬ ಎರಡು ಅರ್ಥಗಳುಂಟು. ಪ್ರಕೃತದಲ್ಲಿ ಗತಿ (ಸಂಚಾರ) ಎಂಬ ಅರ್ಥವನ್ನು ಮಾತ್ರ ಇಟ್ಟುಕೊಳ್ಳಬೇಕು. 'ಶಿಶಿರ' ಶಬ್ದವು ಶ್ವ- ಹಿಂಸಾಯಾಂ ಎಂಬ ಧಾತುವಿನಿಂದ ಹುಟ್ಟಿದೆ. ಶಿರ ಎಂದರೆ ಅಗ್ನಿ. ಮ್ಲೇಂಛ್ಛ ಭಾಷೆಯಲ್ಲಿ ಶಿರ ಶಬ್ದ ಶಿಶಿರವಾಗಿದೆ. 'ಕಕ್ಷಯ' ಎಂದರೆ ಶತ್ರು. ಕ- ಸುಖವನ್ನು, ಕ್ಷಯ- ನಾಶಮಾಡತಕ್ಕವನು. ಮ್ಲೇಂಛ್ಛ ಭಾಷೆಯಲ್ಲಿ 'ಯ'ಕಾರ ಲೋಪ-ವಾಗಿದೆ. ಮಹಾಕಕ್ಷ- ಪ್ರಬಲನಾದ ಶತ್ರು. ಬಿಲೌಕಸಃ- ಇದರ ರೂಢಾರ್ಥವು

ಸರ್ಪವಾಗಿದ್ದರೂ ವಾಸ್ತವಾರ್ಥದಲ್ಲಿ ಕೇವಲ ಯೌಗಿಕಾರ್ಥವನ್ನು ಗ್ರಹಿಸಿ 'ಸುರಂಗ ಮಾರ್ಗದಲ್ಲಿರತಕ್ಕವರು' ಎಂದು ತಿಳಿಯಬೇಕು.

**ಅನಾಪ್ತೈರ್ದತ್ತಮಾದತ್ತೇ ನರಃ ಶಸ್ತ್ರಮಲೋಹಜಂ ।**
**ಶ್ವಾವಿಚ್ಛರಣಮಾಸಾದ್ಯ ಪ್ರಮುಚ್ಯೇತ ಹುತಾಶನಾತ್ ॥** (ಆದಿ. ೧೪೫-೨೫)

ಆಪಾತವಾದ ಅರ್ಥ : ಮನುಷ್ಯನು ಶತ್ರುಗಳಿಂದ ಕೊಡಲ್ಪಟ್ಟಿರುವ ಲೋಹನಿರ್ಮಿತವಲ್ಲದ ಶಸ್ತ್ರವನ್ನು ಸ್ವೀಕರಿಸುತ್ತಾನೆ. ಮುಳ್ಳು ಹಂದಿಯನ್ನು ಶರಣು ಹೊಂದಿದರೆ ಅಗ್ನಿಯಿಂದ ಬಿಡುಗಡೆ ಹೊಂದಬಹುದು.

ವಾಸ್ತವಾರ್ಥ : ನರಃ-ಯಾವ ಮನುಷ್ಯನು, ಅನಾಪ್ತೈಃ-ಶತ್ರುಗಳಿಂದ, ದತ್ತಂ -ಕೊಡಲ್ಪಟ್ಟು, ಮತ್ತು ಅಲ-ಬೆಂಕಿಹೊತ್ತಿಕೊಳ್ಳಬಹುದಾದ ಅರಗು ಮುಂತಾದ ವಸ್ತುಗಳ, ಊಹ-ಸಮುದಾಯದಿಂದ, ಜಂ-ನಿರ್ಮಿತವಾದ, ಶಸ್ತ್ರಂ-ಮನೆಯನ್ನು, ಆದತ್ತೇ-ಪಡೆಯುತ್ತಾನೋ, ಅವನು, ಶ್ವಾವಿತ್-ಮುಳ್ಳು ಹಂದಿಯ, ಶರಣಂ-ಬಿಲವನ್ನು, (ಅದರ ಬಿಲದಂತೆ ಉಭಯ ಪಾರ್ಶ್ವ-ಗಳಲ್ಲಿಯೂ ರಂಧ್ರವಿರುವ ಸುರಂಗವನ್ನು) ಆಸಾದ್ಯ-ಸೇರಿ, ಹುತಾಶನಾತ್ -ಅಗ್ನಿಯಿಂದ, ಪ್ರಮುಚ್ಯೇತ-ಬಿಡುಗಡೆ ಹೊಂದಲು ಸಾಧ್ಯವಾಗುತ್ತದೆ.

ಟಿಪ್ಪಣಿ :- ಇಲ್ಲಿಯೂ ಹಿಂದೆ ಹೇಳಿದಂತೆ 'ಅನಲ'ವು 'ಅಲ'ವಾಗಿದೆ. ಸ್ಸ್ತವು ಶಸ್ತ್ರವಾಗಿದೆ

**ಚರನ್ ಮಾರ್ಗಾನ್ ವಿಜಾನಾತಿ ನಕ್ಷತ್ರೈರ್ವಿಂದತೇ ದಿಶಃ ।**
**ಆತ್ಮನಾ ಚಾತ್ಮನಃ ಪಂಚ ಪೀಡಯನ್ ನಾನುಪೀಡ್ಯತೇ ॥** (ಆದಿ. ೧೪೫-೨೬)

ಆಪಾತವಾಗಿ ತೋರುವ ಅರ್ಥ : ಅಲೆಯುತ್ತಿರುವವನು ದಾರಿಯನ್ನು ಕಂಡು- ಕೊಳ್ಳುವನು. ನಕ್ಷತ್ರಗಳಿಂದ ದಿಕ್ಕುಗಳನ್ನು ತಿಳಿಯುತ್ತಾನೆ. ತನ್ನೊಂದಿಗೆ ತನ್ನ ಐವರನ್ನು ಪೀಡಿಸುತ್ತಿರುವವನು ಪೀಡೆಗೆ ಒಳಗಾಗುವುದಿಲ್ಲ.

ವಾಸ್ತವಾರ್ಥ : ರಾತ್ರಿಯಲ್ಲಿಯೇ ನೀವು ಸುರಂಗ ಮಾರ್ಗವಾಗಿ ತಪ್ಪಿಸಿಕೊಂಡು ಹೋಗಬೇಕು. ದಾರಿ, ದಿಕ್ಕುಗಳ ಬಗ್ಗೆ ನೀವು ಯಾರನ್ನೂ ಕೇಳಬಾರದು. ಹಸ್ತಿನಾವತಿಗೆ ಬರದೆ ನಕ್ಷತ್ರಗಳ ಮೂಲಕ ದಿಕ್ಕುಗಳನ್ನು

ತಿಳಿದುಕೊಂಡು ಬೇರೆ ಕಡೆಗೆ ಪ್ರಯಾಣ ಮಾಡಬೇಕು. ಪರಸ್ಥಳದಲ್ಲಿ ಜೀವಿಸುವುದು ಕಷ್ಟವಲ್ಲವೆ ? ಎಂದರೆ ಹೌದು, ನೀವು ಜಿತೇಂದ್ರಿಯರಾಗಿ ಕೆಲವು ಕಾಲ ಬಾಳಬೇಕು. ತನ್ನೊಂದಿಗೆ ತನ್ನ ಐದು ಇಂದ್ರಿಯಗಳನ್ನು ಕಷ್ಟಕ್ಕೀಡುಮಾಡಿ ಜೀವಿಸಬೇಕಾಗುತ್ತದೆ. ಹಾಗೆ ಜೀವಿಸುತ್ತಿದ್ದರೆ ಶತ್ರುವಿನ ಪೀಡೆಯಿಂದ ತಪ್ಪಿಸಿಕೊಳ್ಳುವಿರಿ. ಮುಂದೆ ನಿಮಗೆ ಸುಖವಾಗುವುದು.

ವಿದುರನ ಮಾತು ಗೂಢವಾಗಿತ್ತೆಂಬುದನ್ನು ವ್ಯಾಸರೇ ಈ ಸಂದರ್ಭದಲ್ಲಿ ಸ್ಪಷ್ಟಪಡಿಸಿದ್ದಾರೆ :-

**ಏವಮುಕ್ತಃ ಪ್ರತ್ಯುವಾಚ ಧರ್ಮರಾಜೋ ಯುಧಿಷ್ಠಿರಃ ।**
**ವಿದುರಂ ವಿದುಷಾಂ ಶ್ರೇಷ್ಠಂ ಜ್ಞಾತಮಿತ್ಯೇವ ಪಾಂಡವಃ ॥** (ಆದಿ. ೧೪೫-೨೭)

ಅರ್ಥ : ಹೀಗೆ ವಿದುರನು ಧರ್ಮರಾಯನಿಗೆ ಹೇಳಿದಾಗ ಧರ್ಮರಾಜನು ಪಂಡಿತ ಶ್ರೇಷ್ಠನಾದ ವಿದುರನನ್ನು ಕುರಿತು ''ಜ್ಞಾತಂ'' (ತಿಳಿಯಿತು) ಎಂದು ಮಾತ್ರ ಹೇಳಿದನು.

ಅನಂತರ ವಿದುರ ಮುಂತಾದವರೆಲ್ಲಾ ಹಸ್ತಿನಾವತಿಗೆ ಹೊರಟುಹೋದ-ಮೇಲೆ ಕುಂತಿಯು ಧರ್ಮರಾಜನ ಬಳಿಗೆ ಬಂದು ಹೇಳುತ್ತಾಳೆ-

''ಯುಧಿಷ್ಠಿರ, ಜನಮಧ್ಯದಲ್ಲಿ ವಿದುರನು ನಿನಗೆ ಏನನ್ನೋ ಹೇಳಿದನು. ಅರ್ಥವಾಗದುದರಿಂದ ಅವನು ಹೇಳಿದರೂ ನಮಗೆ ಹೇಳದೇ ಇದ್ದಂತೆಯೇ ಆಯಿತು. ನೀನು ಮಾತ್ರ 'ತಿಳಿಯಿತು' ಎಂದುಬಿಟ್ಟೆ. ಇದೇನೆಂದು ನಮಗೆ ತಿಳಿಯಲಿಲ್ಲ. ನಾವು ಅದನ್ನು ತಿಳಿಯುವುದರಲ್ಲಿ ತಪ್ಪೇನೂ ಇಲ್ಲವಾದರೆ, ವಿದುರನ ಅಭಿಪ್ರಾಯವೇನೆಂದು ಹೇಳು.''

ಆಮೇಲೆ ಯುಧಿಷ್ಠಿರನು ಕುಂತಿಗೆ ವಿದುರನ ಅಭಿಪ್ರಾಯವನ್ನು ತಿಳಿಸುತ್ತಾನೆ.



ಬಕಾಸುರನ ಸಂಹಾರವಾದ ಮೇಲೆ ಪಾಂಡವರು ದ್ರುಪದ ರಾಜನ ನಗರಕ್ಕೆ ಪ್ರಯಾಣ ಮಾಡುತ್ತಿದ್ದರು. ದಾರಿಯಲ್ಲಿ ಅಂಗಾರಪರ್ಣನೆಂಬ ಗಂಧರ್ವನು

ಸ್ತ್ರೀಯರೊಡನೆ ಗಂಗಾನದಿಯಲ್ಲಿ ಜಲಕ್ರೀಡೆಯಾಡುತ್ತಿದ್ದನು. ಅವನು ಪಾಂಡವರನ್ನು ನೋಡಿ ಕೋಪದಿಂದ ಹೇಳುತ್ತಾನೆ :-

**ನ ನಂಹಸಾಃ ಶೃಂಗಿಣೋ ವಾ ನ ಚ ದೇವಾಂಜನಸ್ರಜಃ ।**
**ಕುಬೇರಸ್ಯ ಯಥೋಷ್ಣೀಷಂ ಕಿಂ ಮಾಂ ಸಮುಪ ಸರ್ಪಥ ॥**

(ಆದಿ. ೧೭೦-೧೫)

ಆಪಾತವಾಗಿ ತೋರುವ ಅರ್ಥ : ನೀವು ನಂಹಸರೂ ಅಲ್ಲ; ಶೃಂಗಿಗಳೂ ಅಲ್ಲ; ದೇವಾಂಜನಸ್ರಜರೂ ಅಲ್ಲ. ಕುಬೇರನ ರುಮಾಲಿನ ಬಳಿಗೆ ಬಂದಂತೆ ನನ್ನ ಬಳಿಗೆ ಏಕೆ ಬರುತ್ತೀರಿ ?

ವಾಸ್ತವಾರ್ಥ : ನೀವು ನಂಹಸಾಃ- ದೇವತೆಗಳು, ನ- ಅಲ್ಲ, ವಾ- ಅಥವಾ, ಶೃಂಗಿಣಃ- ಮಂತ್ರವಾದಿಗಳೂ, ನ- ಅಲ್ಲ, ದೇವಾಂಜನಸ್ರಜಃ- ದೇವತೆಗಳಿಂದ ಪಡೆದ ಕಾಡಿಗೆಯನ್ನಾಗಲಿ, ಹೂಮಾಲೆಯನ್ನಾಗಲಿ ಧರಿಸಿದವರೂ, ನ- ಅಲ್ಲ, ಕುಬೇರಸ್ಯ- ಕುಬೇರನಿಗೆ, ಉಷ್ಣೀಷಂ ಯಥಾ- ರುಮಾಲಿನಂತೆ ಶಿರೋ-ಭೂಷಣನಾದ, ಮಾಂ- ನನ್ನ ಬಳಿಗೆ, ಕಿಂ- ಏಕೆ, ಸಮುಪಸರ್ಪಥ- ಬರುತ್ತಿದ್ದೀರಿ?

ತಾತ್ಪರ್ಯ : ರಾತ್ರಿ ಕಾಲದಲ್ಲಿ ಗಂಧರ್ವನಾದ ನನಗೆ ಬಲವು ಹೆಚ್ಚುವುದು. ಕೇವಲ ಮನುಷ್ಯರಾದ ನೀವು ನನ್ನ ಹತ್ತಿರ ಬಂದರೆ ಘೋರವಾದ ವಿಪತ್ತಿಗೆ ಒಳಗಾಗುತ್ತೀರಿ.



ಧರ್ಮರಾಯನ ರಾಜಸೂಯಯಾಗದಲ್ಲಿ ಭೀಷ್ಮನ ಸೂಚನೆಯಂತೆ ಶ್ರೀಕೃಷ್ಣನಿಗೆ ಅಗ್ರಪೂಜೆ ನಡೆಯಿತು. ಸಭೆಯಲ್ಲಿ ಉಪಸ್ಥಿತನಾಗಿದ್ದ ಶಿಶುಪಾಲನಿಗೆ ಇದು ಸಹಿಸಲಿಲ್ಲ. ಶ್ರೀಕೃಷ್ಣನಿಗೆ ಅಂತಹ ಗೌರವ ಸಲ್ಲತಕ್ಕದ್ದಲ್ಲವೆಂದು ಬಹುವಿಧದಲ್ಲಿ ಶ್ರೀಕೃಷ್ಣನನ್ನು ನಿಂದಿಸಿದನು. ಶಿಶುಪಾಲನ ಶತಾಪರಾಧಗಳನ್ನೂ ಭಗವಂತನು ಕ್ಷಮಿಸಿದನು. ಅನಂತರ ಯುದ್ಧದಲ್ಲಿ ಶಿಶುಪಾಲನನ್ನು ಸಂಹರಿಸಿ ಅವನಿಗೆ ಸಾಯುಜ್ಯ ಪದವಿಯನ್ನು ಅನುಗ್ರಹಿಸಿದನು.

ಇಲ್ಲಿ ಒಂದು ಚೋದ್ಯ ಉಂಟು, ''ಭಗವನ್ನಿಂದೆ ಮಾಡಿದ್ದರಿಂದ ಶಿಶುಪಾಲನು ಪಾಪಿಯಲ್ಲವೆ ? ಅವನಿಗೆ ಸಾಯುಜ್ಯ ದೊರಕಿದುದು ಹೇಗೆ ? ಭಗವನ್ನಿಂದೆ ಮಾಡಿದ ವೇನರಾಜನು ಅನರ್ಥಕ್ಕೆ ಸಿಕ್ಕಿದನು. ಯಾಜ್ಞವಲ್ಕ್ಯರನ್ನು ನಿಂದಿಸಿದ ಶಾಕಲ್ಯನಿಗೆ ಅಪಮೃತ್ಯು ಬಂದಿತು. ಮೃತ ಸಂಸ್ಕಾರವೂ ಇಲ್ಲದೆ ದುರ್ಗತಿಯುಂಟಾಯಿತು. ಇತಿಹಾಸ ಪುರಾಣಗಳಲ್ಲಿ ಇಂತಹ ಉದಾಹರಣೆ-ಗಳು ಬೇಕಾದಷ್ಟಿವೆ. ಆದ್ದರಿಂದ ಶಿಶುಪಾಲನ ನಿಂದಾವಚನಗಳಿಗೂ, ಅವನ ಸದ್ಗತಿಗೂ ಹೊಂದಾಣಿಕೆ ಇಲ್ಲ.''

ಇದಕ್ಕೆ ಸಮಾಧಾನವೇನೆಂದರೆ, ಶಿಶುಪಾಲನ ನಿಂದಾವಚನಗಳಲ್ಲಿ ಗೂಢ-ವಾಗಿ ಶ್ರೀಕೃಷ್ಣನ ಸ್ತುತಿಯುಂಟು. ಆಪಾತವಾದ ನಿಂದೆಗಿಂತ ಗೂಢವಾದ ಸ್ತುತಿಯೇ ಇಲ್ಲಿ ಪ್ರಧಾನ, ಕಾವ್ಯದಲ್ಲಿ ವಾಚ್ಯಾರ್ಥಕ್ಕಿಂತ ವ್ಯಂಗ್ಯಾರ್ಥವು ಪ್ರಧಾನವಾಗಿರುವಂತೆ. ಆದ್ದರಿಂದ ಭಗವಂತನ ಸ್ತುತಿಯೇ ಶಿಶುಪಾಲನ ಸದ್ಗತಿಗೆ ಕಾರಣವಾಯಿತು. ಶಿಶುಪಾಲನ ಮಾತಿನಲ್ಲಿ ಗೂಢವಾದ ಸ್ತುತಿಯಿದೆ ಎಂಬುದಕ್ಕೆ ಕೆಲವು ಉದಾಹರಣೆಗಳನ್ನು ಮಾತ್ರ ಇಲ್ಲಿ ಕೊಟ್ಟಿದೆ.

ಭೀಷ್ಮನು ಶ್ರೀಕೃಷ್ಣನ ಮಹಿಮೆಗಳನ್ನು ಕೊಂಡಾಡಿದಾಗ ಶಿಶುಪಾಲನು ಭೀಷ್ಮನನ್ನು ಮೊದಲು ನಿಂದಿಸುತ್ತಾನೆ. ಆ ನಿಂದೆಯಲ್ಲಿಯೂ ಗೂಢವಾಗಿ ಭೀಷ್ಮನ ಪ್ರಶಂಸೆಯೇ ಇದ್ದು ಅದು ಪರ್ಯಾಯವಾಗಿ ಶ್ರೀಕೃಷ್ಣನ ಸ್ತುತಿಯೇ ಆಗುತ್ತದೆ.

ಮಾಘಕವಿಯೂ ತನ್ನ ಶಿಶುಪಾಲವಧ ಕಾವ್ಯದಲ್ಲಿ ಶಿಶುಪಾಲನ ಮಾತಿಗೆ ಶ್ಲೇಷದಿಂದ ನಿಂದಾಸ್ತುತಿಗಳೆರಡನ್ನು ಅಳವಡಿಸಿರುತ್ತಾನೆ. ಶಿಶುಪಾಲವಧ-15ನೇ ಸರ್ಗ ನೋಡಿ.

ಶಿಶುಪಾಲ-

ಬಿಭೀಷಿಕಾಭಿರ್ಬಹ್ವೀಭಿರ್ಭೀಷಯನ್ ಸರ್ವಪಾರ್ಥಿವಾನ್ ।
ನ ವ್ಯಪತ್ರಪಸೇ ಕಸ್ಮಾದ್ ವೃದ್ಧಃ ಸನ್ ಕುಲಪಾಂಸನಃ ॥

ಅರ್ಥ : ಭೀಷ್ಮ, ನೀನು ವೃದ್ಧನಾಗಿದ್ದರೂ ರಾಜರುಗಳನ್ನೆಲ್ಲಾ ನಾನಾ ಬಗೆ-ಯಲ್ಲಿ ಹೆದರಿಸುತ್ತಾ ಕುಲಗೇಡಿಯಾಗಿರುವೆ. ನಿನಗೇಕೆ ನಾಚಿಕೆಯಾಗುವುದಿಲ್ಲ?

ಗೂಢಾರ್ಥ : ಹೇ ನವ್ಯಪ-ನವ್ಯ-ಸ್ತೋತ್ರಯೋಗ್ಯವಾದ ತತ್ತ್ವವನ್ನು, ಪ-ರಕ್ಷಿಸುತ್ತಿರುವ ಭೀಷ್ಮನೇ! ಸ ತ್ವಂ-ಪ್ರಸಿದ್ಧವಾದ ನೀನು, ಕುಲಪಾಂ-ಕುಲೋದ್ಧಾರಕರಾದ ಬ್ರಹ್ಮಜ್ಞಾನಿಗಳ ಮಧ್ಯದಲ್ಲಿ, ವೃದ್ಧಃ ಸನ್-ಹಿರಿಯನಾಗಿ, ಪಾರ್ಥಿವಾನ್-ದೇಹಾಭಿಮಾನಿಗಳಾದ, ನಃ-ನಮ್ಮನ್ನು, ಬಹ್ವೀಭಿಃ-ನಾನಾ ಬಗೆಯ, ಬಿಭೀಷಿಕಾಭಿಃ-ಸಂಸಾರಭಯವನ್ನು ತೋರಿಸುವ ವಿಚಾರಗಳಿಂದ, ಭೀಷಯನ್-ಭಯಗೊಳಿಸಲು, ಕಸ್ಮಾತ್-ಏತಕ್ಕೆ, ತ್ರಪಸೇ-ಹಿಂಜರಿಯುತ್ತೀಯೆ ?

ತಾತ್ಪರ್ಯ : ಹಿರಿಯನಾದ ನೀನು ನಮಗೆ ಸಂಸಾರದ ಕಷ್ಟಗಳನ್ನು ತೋರಿಸಿ ಭಯಹರವಾದ ತತ್ತ್ವವನ್ನು ಬೋಧಿಸಬೇಕು. ನಾವು ಅನಧಿಕಾರಿಗಳೆಂದು ಭಾವಿಸಿ ಅದನ್ನು ರಹಸ್ಯವಾಗಿಡಬಾರದು.

ಟಿಪ್ಪಣಿ : 'ಯಚ್ಛರೀರಂ ಸಾ ಪೃಥಿವೀ'' ಎಂದು ಶ್ರುತಿಯಿರುವುದರಿಂದ ಪೃಥಿವಿಯೆಂದರೆ ದೇಹ, ''ಪಾರ್ಥಿವ'' ಎಂದರೆ ದೇಹಾಭಿಮಾನಿ ಎಂದು ಅರ್ಥವಾಗುತ್ತದೆ

ಶಿಶುಪಾಲ-

**ಕಥಂ ಭೋಜಸ್ಯ ಪುರುಷೇ ವರ್ಗಪಾಲೇ ದುರಾತ್ಮನಿ ।**
**ಸಮಾವೇಶಯಸೇ ಸರ್ವಂ ಜಗತ್ ಕೇವಲ ಕಾಮ್ಯಯಾ ॥** (ಸಭಾ. ೪೪-೩೬)

ಅರ್ಥ : ಎಲೈ ಭೀಷ್ಮ ! ಭೋಜಸ್ಯ-ಭೋಜ ವಂಶದಲ್ಲಿ ಹುಟ್ಟಿದ ಕಂಸನ, ಪುರುಷೇ-ಸೇವಕನೂ, ವರ್ಗಪಾಲೇ-ಹಸುಗಳ ಮಂದೆಯನ್ನು ಕಾಯತಕ್ಕವನೂ ಆದ, ದುರಾತ್ಮನಿ-ದುಷ್ಟನಾದ ಈ ಕೃಷ್ಣನಲ್ಲಿ, ಕೇವಲ ಕಾಮ್ಯಯಾ-ಬರಿಯ ಆಸೆಯಿಂದ, ಸರ್ವಂ-ಎಲ್ಲಾ, ಜಗತ್-ಜಗತ್ತನ್ನೂ, ಕಥಂ-ಹೇಗೆ, ಸಮಾವೇಶ-ಯಸೇ-ಅಂತರ್ಭಾವ ಮಾಡುತ್ತೀಯೆ?

ತಾತ್ಪರ್ಯ : ಅಲ್ಪ ಮನುಷ್ಯನಾದ ಕೃಷ್ಣನಲ್ಲಿ ಸಕಲ ಪ್ರಪಂಚವೂ ಅಡಗಿದೆ ಎಂದು ಹೇಳುವುದು ಬರಿಯ ಕಲ್ಪನೆ. ಅದು ಎಂದಿಗೂ ಸತ್ಯವಲ್ಲ.

ಗೂಢಾರ್ಥ : ಭೋ-ಹೇ ಭೀಷ್ಮಾಚಾರ್ಯ, ಅಜಸ್ಯ-ಬ್ರಹ್ಮನಿಗೆ, ಪುರುಷೇ -ಅಂತರಾತ್ಮನಾಗಿಯೂ, ವರ್ಗ-ದೇಹೇಂದ್ರಿಯ ಸಮುದಾಯಕ್ಕೆ, ಪಾಲೇ-

ಪಾಲಕನಾಗಿಯೂ, ಅದುರಾತ್ಮನಿ-ಕಾಲುಷ್ಯ ರಹಿತನಾಗಿಯೂ ಇರುವ ಪರಮಾತ್ಮನಲ್ಲಿ, ನಿರ್ಗುಣ ಕಾಮ್ಯಯಾ-ನಿರ್ಗುಣ ಸ್ವರೂಪನಾಗಬೇಕೆಂಬ ಇಚ್ಛೆಯಿಂದ, ಸರ್ವಂ ಜಗತ್-ಎಲ್ಲಾ ಪ್ರಪಂಚವನ್ನೂ, ಕಥಂ-ಹೇಗೆ, ಸಮಾವೇಶಯಸೇ-ಆರೋಪ ಮಾಡುತ್ತೀಯೆ?

ತಾತ್ಪರ್ಯ : ಸಚ್ಚಿದಾನಂದ ಸ್ವರೂಪನೂ, ನಿರ್ಗುಣನೂ ಆದ ಶ್ರೀಕೃಷ್ಣನಲ್ಲಿ ಪ್ರಪಂಚವನ್ನು ಆರೋಪ ಮಾಡಲು ಸಾಧ್ಯವಿಲ್ಲ. ಏಕೆಂದರೆ ಅವನು ಗಡಿಗೆಗೆ ಮಣ್ಣು ಇದ್ದಂತೆ ಪರಿಣಮಿಸುವ ಕಾರಣನಲ್ಲ. ರಜ್ಜುಸರ್ಪನ್ಯಾಯದಂತೆ ಅಜ್ಞಾನಮೂಲಕವಾದ ವಿವರ್ತಕಾರಣ. ಪರಮಾತ್ಮನು ಅದಕ್ಕೆ ಅಧಿಷ್ಠಾತೃ. ಸಗುಣೋಪಾಸಕರಿಗೆ ನಿರ್ಗುಣ ಪ್ರಾಪ್ತಿಯಾಗಲಾರದು.

**ತದ್ವತ್ತ್ವಮಪ್ಯಧರ್ಮಿಷ್ಠ ಸದಾ ವಾಚಃ ಪ್ರಭಾಷಸೇ ।**
**ಲೋಕ ವಿದ್ವಿಷ್ಟಕರ್ಮಾ ಹಿ ನಾನ್ಯೋಽಸ್ತಿ ಭವತಾ ಸಮಃ ॥**

(ಸಭಾ. ೪೪-೩೨)

ಅರ್ಥ : ಅಧರ್ಮಿಷ್ಠ-ಅಧರ್ಮಶಾಲಿಯಾದ ಭೀಷ್ಮನೆ, ತ್ವಮಪಿ-ನೀನೂ, ತದ್ವತ್-ಅದರಂತೆ (ಭೂಲಿಂಗ ಪಕ್ಷಿಯಂತೆ), ಸದಾ-ಯಾವಾಗಲೂ, ವಾಚಃ-ಮಾತುಗಳನ್ನು, ಪ್ರಭಾಷಸೇ-ಆಡುತ್ತೀಯೆ, ಭವತಾ ಸಮಃ-ನಿನಗೆ ಸದೃಶನಾದ, ಅನ್ಯಃ-ಇನ್ನೊಬ್ಬ, ಲೋಕವಿದ್ವಿಷ್ಟ ಕರ್ಮಾ-ಜನರಿಗೆ ನಿಂದ್ಯವಾದ ಕೆಲಸ ಮಾಡತಕ್ಕವನು, ನಾಸ್ತಿ-ಇಲ್ಲ.

ಗೂಢಾರ್ಥ : ಅಧರ್ಮಿ-ಸಕಲ ಧರ್ಮಗಳಿಂದಲೂ ವರ್ಜಿತನಾದ ಪರಬ್ರಹ್ಮನಲ್ಲಿ, ಷ್ಠ-ಇರತಕ್ಕ ಭೀಷ್ಮನೆ, ಸದಾವಾಚಃ ಪ್ರಭಾಷಸೇ-ಯಾವಾಗಲೂ ಪರಮಾತ್ಮನಿಗೆ ಸಂಬಂಧಿಸಿದ ಮಾತುಗಳನ್ನಾಡುತ್ತೀಯೆ. ಭವತಾ ಸಮಃ-ನಿನಗೆ ಸದೃಶನಾದ, ಅನ್ಯಃ-ಇನ್ನೊಬ್ಬ, ಲೋಕವಿತ್-ಲೋಕಜ್ಞನೂ, ದ್ವಿಷ್ಟ-ಹಿಂಸಾ-ಯುಕ್ತವಾದ, ಕರ್ಮ-ಕ್ಷತ್ರಿಯ ಕರ್ಮವನ್ನು ಮಾಡತಕ್ಕ ವೀರನೂ, ನಾಸ್ತಿ-ಇಲ್ಲ.

ಟಿಪ್ಪಣಿ : ಭೂಲಿಂಗ ಎಂಬ ಒಂದು ಬಗೆಯ ಪಕ್ಷಿ 'ಮಾ ಸಾಹಸಂ' ಎಂದು ಕೂಗುತ್ತಿರುವುದಂತೆ. 'ಮಾ ಸಾಹಸಂ' ಎಂದರೆ 'ಸಾಹಸ ಕಾರ್ಯವನ್ನು

ಮಾಡಬೇಡ' ಎಂದರ್ಥ. ಆದರೆ ಆ ಪಕ್ಷಿಯು ಮಾಡುವುದು ಸಾಹಸ ಕಾರ್ಯವನ್ನೇ. ಸಿಂಹದ ದವಡೆಯಲ್ಲಿ ಸಿಕ್ಕಿಕೊಂಡಿರುವ ಮಾಂಸದ ತುಂಡನ್ನು ತಿನ್ನುವುದಕ್ಕಾಗಿ ಸಿಂಹದ ಬಾಯಲ್ಲಿ ನುಗ್ಗುವುದು ಅದರ ಸ್ವಭಾವ. ಇತರರಿಗೆ ಉಪದೇಶಿಸುವುದೊಂದು, ತಾನು ಆಚರಿಸುವುದಿನ್ನೊಂದು ಆದಾಗ ಈ ಭೂಲಿಂಗ ಪಕ್ಷಿಯನ್ನು ದೃಷ್ಟಾಂತವಾಗಿ ಉಪಯೋಗಿಸುತ್ತಾರೆ. ಇದಕ್ಕೆ ಭೂಲಿಂಗ ನ್ಯಾಯವೆಂದು ಹೆಸರು.



ಪಾಂಡವರು ವನವಾಸದಲ್ಲಿದ್ದಾಗ ಲೋಮಶ ಮಹರ್ಷಿಯೊಡನೆ ಕೆಲವುಕಾಲ ತೀರ್ಥಯಾತ್ರೆಯನ್ನು ಮಾಡಿದರು. ಯಮುನಾ ತೀರದಲ್ಲಿದ್ದ ಪ್ಲಕ್ಷಾವತರಣ ಎಂಬ ತೀರ್ಥದ ಬಳಿಗೆ ಬಂದಾಗ ಲೋಮಶರು ಧರ್ಮರಾಜನನ್ನು ಕುರಿತು ತೀರ್ಥದ ಮಹಿಮೆಯನ್ನು ಹೇಳುತ್ತಾರೆ- ಒಂದು ಸಲ ಒಬ್ಬ ಹೆಂಗಸು ತನ್ನ ಮಗನೊಡನೆ ಈ ತೀರ್ಥಕ್ಕೆ ಬಂದಳು. ಕೆಲವು ದಿನಗಳು ಇಲ್ಲಿ ವಾಸಮಾಡಬೇಕೆಂದು ಅವಳ ಉದ್ದೇಶವಿತ್ತು. ಆಗ ಒಂದು ಪಿಶಾಚಿಯು ಬಂದು ಆ ಹೆಂಗಸನ್ನು ಕುರಿತು ಹೇಳಿದ್ದೇನೆಂದರೆ :-

**ಯುಗಂಧರೇ ದಧಿ ಪ್ರಾಶ್ಯ ಉಷಿತ್ವಾ ಚಾಚ್ಯುತಸ್ಥಲೇ ।**
**ತದ್ವದ್ ಭೂತಲಯೇ ಸ್ನಾತ್ವಾ ಸಪುತ್ರಾ ವಸ್ತುಮರ್ಹಸಿ ॥** (ವನ. ೧೨೯-೯)

ಆಪಾತಾರ್ಥ : ಎಲೈ ಸ್ತ್ರೀಯೆ ! ನೀನು, ಯುಗಂಧರೆ-ಯುಗಂಧರವೆಂಬ ದೇಶದಲ್ಲಿ, ದಧಿ-ಮೊಸರನ್ನು, ಪ್ರಾಶ್ಯ-ಸೇವಿಸಿ, ಅಚ್ಯುತಸ್ಥಲೇ-ಅಚ್ಯುತಸ್ಥಲ ವೆಂಬ ಗ್ರಾಮದಲ್ಲಿ, ಸ್ನಾತ್ವಾ-ಸ್ನಾನಮಾಡಿ, ಸಪುತ್ರಾ-ಮಗನೊಡನೆ, ವಸ್ತುಂ -ಇಲ್ಲಿ ವಾಸಮಾಡಲು, ಅರ್ಹಸಿ-ಹೇಗೆ ಅರ್ಹಳಾದೀಯೆ ?

ಗೂಢಾರ್ಥ : ಯುಗಂಧರದೇಶದಲ್ಲಿ ಒಂಟೆಯ ಹಾಲಿನಿಂದ ಮೊಸರನ್ನು ಮಾಡುತ್ತಾರೆ. ಒಂಟೆಯ ಮೊಸರು ಧರ್ಮಶಾಸ್ತ್ರದಲ್ಲಿ ನಿಷೇಧಿಸಲ್ಪಟ್ಟಿದೆ. ಅಂತಹ ಮೊಸರನ್ನು ನೀನು ಸೇವಿಸಿದ್ದೀಯೆ. ಅಚ್ಯುತಸ್ಥಲದಲ್ಲಿ ಸಂಕರ ಜಾತಿಯವರೇ ವಾಸವಾಗಿದ್ದಾರೆ. ನೀನು ಅವರೊಡನೆ ವಾಸಮಾಡಿದ್ದೀಯೆ. ಭೂತಲಯದಲ್ಲಿ ಹೆಣಗಳನ್ನು ನದಿಗೆ ಎಸೆಯುತ್ತಾರೆ. ಆ ನದಿಯಲ್ಲಿ ನೀನು

ಸ್ನಾನಮಾಡಿದ್ದೀಯೆ. ಹೀಗೆ ಮೂರು ಬಗೆಯ ಪಾಪಕೃತ್ಯಗಳನ್ನು ನೀನು ಮಾಡಿದ್ದೀಯೆ. ಅದಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡಿಲ್ಲ. ಆದ್ದರಿಂದ ಅಪವಿತ್ರಳಾದ ನೀನು ಈ ತೀರ್ಥದಲ್ಲಿ ವಾಸಮಾಡಲು ಅನರ್ಹಳು.



ಕಹೋಡಮುನಿಯ ಮಗ ಅಷ್ಟಾವಕ್ರ. ಆತನು ತಾಯಿಯ ಗರ್ಭದಲ್ಲಿದ್ದಾಗ ಕಹೋಡನು ಧನಾರ್ಜನೆಗಾಗಿ ಜನಕ ಮಹಾರಾಜನ ಆಸ್ಥಾನಕ್ಕೆ ಹೋದನು. ಅಲ್ಲಿ ಬಂದಿ ಎಂಬ ಪಂಡಿತನೊಡನೆ ವಾದಮಾಡಿ ಸೋತುಹೋದನು. ಬಂದಿಯು ಕಹೋಡನನ್ನು ನದಿಯಲ್ಲಿ ಮುಳುಗಿಸಿ ಕೊಲ್ಲಿಸಿ ಬಿಟ್ಟನು.

ಅಷ್ಟಾವಕ್ರನಿಗೆ ಈ ಸಂಗತಿ ಮೊದಲು ತಿಳಿಯಲಿಲ್ಲ. ಆತನಿಗೆ ಹನ್ನೆರಡು ವರ್ಷ ವಯಸ್ಸಾದ ಮೇಲೆ ಒಂದು ದಿನ ಆತನ ತಾಯಿ ಅಕಸ್ಮಾತ್ ಈ ಸಂಗತಿಯನ್ನು ಹೇಳಿಬಿಟ್ಟಳು. ಅಷ್ಟಾವಕ್ರನಿಗೆ ತನ್ನ ತಂದೆಯ ಗತಿಯನ್ನು ಕೇಳಿ ಬಹಳ ದುಃಖವಾಯಿತು. ತಂದೆಯನ್ನು ಕೊಲ್ಲಿಸಿದ ಆ ಪಂಡಿತನನ್ನು ವಾದದಲ್ಲಿ ಸೋಲಿಸಬೇಕೆಂದು ನಿಶ್ಚಯಿಸಿ ಜನಕರಾಜನ ಆಸ್ಥಾನಕ್ಕೆ ಬಂದನು. ''ಈ ಬಾಲಕನು ಬಂದಿ ಪಂಡಿತನನ್ನು ಗೆಲ್ಲುವನೆ ?'' ಎಂದು ಜನಕರಾಜನಿಗೆ ಸೋಜಿಗವೆನಿಸಿತು. ಅಷ್ಟಾವಕ್ರನ ಬುದ್ಧಿಶಕ್ತಿಯನ್ನು ಪರೀಕ್ಷಿಸಲು ಜನಕರಾಜನು ಹೇಳುತ್ತಾನೆ :-

**ತ್ರಿಂಶಕದ್ವಾದಶಾಂಶಸ್ಯ ಚತುರ್ವಿಂಶತಿಪರ್ವಣಃ ।**
**ಯಸ್ತ್ರಿಷಷ್ಟಿಶತಾರಸ್ಯ ವೇದಾರ್ಥಂ ಸ ಪರಃ ಕವಿಃ ॥** (ವನ. ೧೩೩-೨೪)

''ಮೂವತ್ತು ವಿಭಾಗಗಳುಳ್ಳ ಹನ್ನೆರಡು ಅಂಶಗಳುಳ್ಳದ್ದೂ, ಇಪ್ಪತ್ತು ನಾಲ್ಕು ಭಾಗಗಳುಳ್ಳದ್ದೂ, ಮುನ್ನೂರು ಅರವತ್ತು ಅರೆಕಾಲು ಉಳ್ಳದ್ದೂ ಆದ ವಸ್ತು ಯಾವುದೋ ಅದರ ಅರ್ಥವನ್ನು ಬಲ್ಲವನು ವಿದ್ವಾಂಸನು.''

ನೀನು ಇದರ ಅರ್ಥವನ್ನು ಬಲ್ಲೆಯಾದರೆ ಹೇಳು ಎಂದು ಅಭಿಪ್ರಾಯ.

ಗೂಢಾರ್ಥ : ಇದು ಕಾಲಚಕ್ರವನ್ನು ಕುರಿತ ಪ್ರಶ್ನೆ. ಒಂದು ವರ್ಷದಲ್ಲಿ ಸೂರ್ಯನು ಮೇಷಾದಿಯಾಗಿ ಹನ್ನೆರಡು ರಾಶಿಗಳನ್ನು ಸುತ್ತುತ್ತಾನೆ.

ಒಂದೊಂದು ರಾಶಿಗೆ ಮೂವತ್ತು ಅಂಶಗಳು. ''ತ್ರಿಂಶಕ ದ್ವಾದಶಾಂಶಸ್ಯ'' ಎಂಬುದು ಸೌರಸಂವತ್ಸರವನ್ನು ಉದ್ದೇಶಿಸಿದೆ. ಹಾಗೆಯೇ ''ಚತುರ್ವಿಂಶತಿ-ಪರ್ವಣಃ'' ಎಂಬುದು ಚಾಂದ್ರಸಂವತ್ಸರವನ್ನು ಕುರಿತದ್ದು. ಚಂದ್ರನ ಗತಿ-ಭೇದದಿಂದ ಹುಣ್ಣಿಮೆ, ಅಮಾವಾಸ್ಯೆಗಳೆಂದು ತಿಂಗಳಿಗೆ ಎರಡು ಪರ್ವ-ಗಳಾಗುತ್ತವೆ. ಒಂದು ವರ್ಷಕ್ಕೆ ಇಪ್ಪತ್ತುನಾಲ್ಕು ಪರ್ವಗಳು. ''ತ್ರಿಷಷ್ಟಿಶ-ತಾರಸ್ಯ'' ಎಂಬುದು ಸಾವನ ಸಂವತ್ಸರವನ್ನು ಕುರಿತದ್ದು. ಮುನ್ನೂರು ಅರವತ್ತು ದಿನಗಳೇ ಅರಗಳು. ಜನಕನ ಪ್ರಶ್ನೆಯಲ್ಲಿ 'ಅರ್ಥ' ಶಬ್ದಕ್ಕೆ ಪ್ರಯೋಜನವೆಂದು ಅರ್ಥ. ಈ ರೀತಿಯಲ್ಲಿ ಮೂರು ಬಗೆಯ ಸಂವತ್ಸರ ರೂಪವನ್ನು ತಳೆದಿರುವ ಕಾಲಚಕ್ರದ ಪ್ರಯೋಜನವನ್ನು ಯಾವನು ಬಲ್ಲನೋ ಆತನೇ ಜ್ಞಾನಿಯೆಂದು ತಾತ್ಪರ್ಯ.

ಜನಕರಾಜನ ಪ್ರಶ್ನೆಗೆ ಅಷ್ಟಾವಕ್ರನು ಹೀಗೆ ಉತ್ತರ ಹೇಳಿದನು-

**ಚತುರ್ವಿಂಶತಿಪರ್ವ ತ್ವಾಂ ಷಣ್ಣಾಭಿ ದ್ವಾದಶಪ್ರಧಿ ।**
**ತತ್ತ್ರಿಷಷ್ಟಿಶತಾರಂ ವೈ ಚಕ್ರಂ ಪಾತು ಸದಾಗತಿ ॥** (ವನ. ೧೩೩-೨೫)

''ಇಪ್ಪತ್ತುನಾಲ್ಕು ಭಾಗಗಳೂ, ಆರು ಅಚ್ಚುಗಳೂ, ಹನ್ನೆರಡು ನೇಮಿ-ಗಳೂ, ಮುನ್ನೂರು ಅರವತ್ತು ಅರೆಕಾಲುಗಳುಳ್ಳದ್ದೂ ಆಗಿ ಸದಾ ಉರುಳು-ತ್ತಿರುವ ಚಕ್ರವು ನಿನ್ನನ್ನು ಕಾಪಾಡಲಿ.'' ಆರು ಅಚ್ಚುಗಳು=ಆರು ಋತುಗಳು.

ಸದಾ ಉರುಳುತ್ತಿರುವ ಚಕ್ರವೆಂದರೆ ಕಾಲಚಕ್ರ. ಅಷ್ಟಾವಕ್ರನು ಜನಕ-ರಾಜನ ಮಾತುಗಳನ್ನು ಅನುವಾದ ಮಾಡಿದ್ದಲ್ಲದೆ 'ಷಣ್ಣಾಭಿ, ದ್ವಾದಶಪ್ರಧಿ' ಎಂಬ ಎರಡು ವಿಶೇಷಣಗಳನ್ನೂ ಹೊಸದಾಗಿ ಸೇರಿಸಿ ತನ್ನ ವೈದುಷ್ಯವನ್ನು ಪ್ರಕಾಶಪಡಿಸಿಕೊಂಡಿದ್ದಾನೆ. 'ಸದಾಗತಿ ಚಕ್ರಂ' ಎಂಬ ಶಬ್ದಗಳಿಂದ 'ಎಲೈ ರಾಜನೆ, ನೀನು ಕೇಳುವ ಪ್ರಶ್ನೆ ಕಾಲಚಕ್ರವನ್ನು ಕುರಿತದ್ದು' ಎಂದು ಸ್ಪಷ್ಟವಾಗಿ ಉತ್ತರ ಕೊಟ್ಟಂತಾಯಿತು. ಪುನಃ ಜನಕನು ಪ್ರಶ್ನೆಮಾಡುತ್ತಾನೆ :-

**ವಡವೇ ಇವ ಸಂಯುಕ್ತೇ ಶ್ಯೇನಪಾತೇ ದಿವೌಕಸಾಮ್ ।**
**ಕಸ್ತಯೋರ್ಗರ್ಭಮಾಧತ್ತೇ ಗರ್ಭಂ ಸುಷುವತುಶ್ಚಕಮ್ ॥**

(ವನ. ೧೩೩-೨೬)

ಅರ್ಥ : ವಡವೇ ಇವ-ಹೆಣ್ಣು ಕುದುರೆಗಳಂತೆ, ಸಂಯುಕ್ತೇ-ಸಹಚಾರಿ-ಗಳಾಗಿದ್ದು, ಶ್ಯೇನಪಾತೇ-ಶ್ಯೇನ-ಗಿಡಗದಂತೆ, ಪಾತೇ-ಎರಗತಕ್ಕ (ಎರಡು ವಸ್ತುಗಳು ಇವೆ.) ದಿವೌಕಸಾಂ-ದೇವತೆಗಳ ಮಧ್ಯದಲ್ಲಿ, ಕಃ-ಯಾರು, ತಯೋಃ-ಅವುಗಳ, ಗರ್ಭಂ-ಗರ್ಭವನ್ನು, ಆಧತ್ತೇ-ಧರಿಸುತ್ತಾರೆ?-ಎಂದರೆ ಯಾರ ಗರ್ಭದಲ್ಲಿ ಅವು ಹುಟ್ಟುತ್ತವೆ ? ಅವು, ಕಂ-ಯಾರನ್ನು, ಗರ್ಭಂ-ಗರ್ಭವನ್ನಾಗಿ, ಸುಷುವತುಃ-ಹಡೆದರು, ಎಂದರೆ ಅವುಗಳಿಂದ ಹುಟ್ಟತಕ್ಕದ್ದು ಯಾವುದು?

ತಾತ್ಪರ್ಯ : ಕುದುರೆಗಳ ಹಾಗೆ ಜೋಡಿಯಾಗಿ ಸಂಚರಿಸತಕ್ಕ ಎರಡು ಪದಾರ್ಥಗಳಿವೆ. ಗಿಡಗವು ಪಾರಿವಾಳದ ಮೇಲೆ ಎರಗುವಂತೆ ಇವುಗಳಿಗೆ ಥಟ್ಟನೆ ಎರಗುವ ಸ್ವಭಾವವಿದೆ. ಇವು ಯಾವುವು ? ಇವುಗಳನ್ನು ಹಡೆದ ತಂದೆ ಯಾರು ? ಮತ್ತು ಇವುಗಳ ಮಗನು ಯಾರು ? ಮಗನು ಇವುಗಳಿಗೆ ತಂದೆಯೂ ಆಗಿರಬೇಕು.

ಅಷ್ಟಾವಕ್ರನು ಉತ್ತರ ಹೇಳಿದ್ದೇನೆಂದರೆ :-

**ಮಾಸ್ಮ ತೇ ಚ ಗೃಹೇ ರಾಜನ್ ಶಾತ್ರವಾಣಾಮಪಿ ಧ್ರುವಮ್ ।**
**ವಾತಸಾರಥಿರಾಗಂತಾ ಗರ್ಭಂ ಸುಷುವತುಶ್ಚ ತಮ್ ॥** (ವನ. ೧೩೩-೨೭)

''ರಾಜನ್-ಎಲೈ ರಾಜನೇ, ತೇ-ಅವೆರಡು ಪದಾರ್ಥಗಳು, ತೇ-ನಿನ್ನ, ಗೃಹೇ-ಮನೆಯಲ್ಲಿಯೂ, ಶಾತ್ರವಾಣಾಮಪಿ-ನಿನ್ನ ಶತ್ರುಗಳ ಮನೆ-ಯಲ್ಲಿಯೂ ಕೂಡ, ಧ್ರುವಂ-ಶಾಶ್ವತವಾಗಿ, ಮಾಸ್ಮ (ಸ್ಯಾತಾಂ)-ಉಂಟಾಗ-ದಿರಲಿ. ವಾತಸಾರಥಿ -ಮೋಹವೂ ಮತ್ತು ಮನಸ್ಸೂ, ಆಗಂತಾ-ಉತ್ಪನ್ನವಾಗಿ, ಅವೆರಡು ಪದಾರ್ಥಗಳನ್ನೂ ಹಡೆಯುತ್ತದೆ. ಆ ಪದಾರ್ಥಗಳು, ತಂ-ಆ ವಾತಸಾರಥಿಯನ್ನೇ, ಸುಷುವತುಃ-ಹಡೆದವು.''

ಆ ಪದಾರ್ಥಗಳ ಹೆಸರನ್ನು ಹೇಳುವುದೂ ಕೂಡ ಮಂಗಳಕರವಲ್ಲವೆಂಬ ಭಾವನೆಯಿಂದ ಅಷ್ಟಾವಕ್ರನು ಬೇರೆ ರೀತಿಯಲ್ಲಿ ಉತ್ತರ ಹೇಳುತ್ತಾನೆ. ಆಧಿದೈವಿಕವಾಗಿಯೂ, ಆಧ್ಯಾತ್ಮಿಕವಾಗಿಯೂ ಉತ್ತರ ಎರಡು ವಿಧವಾಗಿದೆ.

ಆಧಿದೈವಿಕವಾದ ಉತ್ತರ :-

ಜೋಡಿ ಪದಾರ್ಥಗಳು ಮಿಂಚು ಮತ್ತು ಸಿಡಿಲು. ಅವುಗಳ ತಂದೆ ಮೇಘ. ಮೇಘದಿಂದ ತಾನೇ ಮಿಂಚು, ಸಿಡಿಲುಗಳು ಹುಟ್ಟುತ್ತವೆ ? ಅವು ಅಗ್ನಿ-ಸ್ವರೂಪವಾದವುಗಳು. ಅಗ್ನಿಯಿಂದ ಜಲರೂಪವಾದ ಮೇಘ ಹುಟ್ಟುತ್ತದೆ. ''ಆಗ್ನೇರಾಪಃ'' ಎಂದು ಶ್ರುತಿ ಹೇಳುತ್ತದೆ. ಆದ್ದರಿಂದ ಸಿಡಿಲು, ಮಿಂಚು-ಗಳಿಂದ ಮೇಘ ಹುಟ್ಟಿತು ಎನ್ನುವುದು ಯುಕ್ತವಾದದ್ದೇ ಸರಿ. ಈ ಸಿಡಿಲು ಮಿಂಚುಗಳು ನಿನ್ನ ಮನೆಗೆ ಎರಗುವುದು ಬೇಡ. ಇವು ಅಪಮೃತ್ಯುವನ್ನುಂಟು-ಮಾಡುತ್ತವೆ. ಧರ್ಮಶಾಲಿಯಾದ ಕ್ಷತ್ರಿಯನು ಶತ್ರುಗಳಿಗೂ ಅಪಮೃತ್ಯುವನ್ನು ಬಯಸಕೂಡದು. ಆದ್ದರಿಂದ ನಿನ್ನ ಶತ್ರುಗಳ ಮನೆಗೂ ಇವು ಎರಗುವುದು ಬೇಡ. ವಾತಸಾರಥಿಃ-ಮೋಡ.

ಆಧ್ಯಾತ್ಮಿಕವಾದ ಉತ್ತರ :- ಜೋಡಿ ಪದಾರ್ಥಗಳು ದುಃಖ ಮತ್ತು ಮೃತ್ಯು ಇವುಗಳ ತಂದೆ ಮನಸ್ಸು. ಸಂಸಾರದ ಕಷ್ಟಗಳಿಗೆಲ್ಲಾ ಮನಸ್ಸು ಮತ್ತು ಮೋಹವು ಕಾರಣವೆಂಬುದು ವೇದಾಂತದ ಸಿದ್ಧಾಂತ. ಆದ್ದರಿಂದ ದುಃಖ, ಮೃತ್ಯುಗಳಿಗೆ ಇದು ತಂದೆ. ಮನಸ್ಸು ಅವುಗಳ ಮಗನೂ ಹೌದು. ಹೇಗೆಂದರೆ, ಅವು ವಾಸನಾರೂಪದಿಂದ ನಿಂತು ಪುನರ್ಜನ್ಮಕ್ಕೂ, ಮನಸ್ಸಿಗೂ ಮೋಹಕ್ಕೂ ಕಾರಣವಾಗುತ್ತವೆ.



ಅನಂತರ ಜನಕರಾಜನು ಅಷ್ಟಾವಕ್ರನಿಗೆ ಬಂದಿಪಂಡಿತನ ಸಂದರ್ಶನ ಮಾಡಿಸಿದನು. ಅವರಿಬ್ಬರಿಗೂ ವಾದ ಪ್ರಾರಂಭವಾಯಿತು. ಬಂದಿಪಂಡಿತನು ಪೂರ್ವಪಕ್ಷ ಮಾಡುವುದು, ಅಷ್ಟಾವಕ್ರನು ಅದನ್ನು ನಿರಾಕರಿಸುವುದು- ಹೀಗೆ ವಾದ ಬೆಳೆಯುತ್ತದೆ. ಇಲ್ಲಿ ಚಮತ್ಕಾರವೇನೆಂದರೆ, ಅವರಿಬ್ಬರ ವಾದ ಪ್ರತಿವಾದಗಳ ಅಭಿಪ್ರಾಯ ಸ್ಪಷ್ಟವಾದ ರೀತಿಯಲ್ಲಿ ತಿಳಿದು ಬರುವುದಿಲ್ಲ. ಬಂದಿಪಂಡಿತನು ಒಂದು ಸಂಖ್ಯೆಯುಳ್ಳ ಕೆಲವು ಪದಾರ್ಥಗಳನ್ನು ಹೇಳುತ್ತಾನೆ. ಅಷ್ಟಾವಕ್ರನು ಅದಕ್ಕೆ ಉತ್ತರವಾಗಿ ಎರಡು ಸಂಖ್ಯೆಯುಳ್ಳ ಪದಾರ್ಥಗಳನ್ನು ಹೆಸರಿಸುತ್ತಾನೆ. ಪುನಃ ಬಂದಿಯು ಮೂರು ಸಂಖ್ಯೆಯ ವಸ್ತುಗಳನ್ನು ಪಟ್ಟಿ

ಮಾಡಲಾಗಿ, ಅಷ್ಟಾವಕ್ರನು ನಾಲ್ಕು ಸಂಖ್ಯೆಯ ವಸ್ತುಗಳನ್ನು ಪರಿಗಣಿಸುತ್ತಾನೆ. ಹೀಗೆ ಇದು ಹದಿಮೂರು ಸಂಖ್ಯೆಯವರೆಗೂ ಹೋಗುತ್ತದೆ. ಬಂದಿಯು ಶ್ಲೋಕದ ಅರ್ಥವನ್ನು ಹೇಳಿ ಅದನ್ನು ಪೂರ್ಣಮಾಡಲಾರದೆ ನಿಂತು-ಬಿಡುತ್ತಾನೆ. ಅಷ್ಟಾವಕ್ರನು ಉತ್ತರಾರ್ಧವನ್ನು ಹೇಳಿ ಶ್ಲೋಕವನ್ನು ಪೂರ್ಣ-ಮಾಡಿ ಬಂದಿಯನ್ನು ಪರಾಜಯಗೊಳಿಸುತ್ತಾನೆ. ಹೇಗೆಂದರೆ :-

ಬಂದಿ : ಒಬ್ಬನೇ ಅಗ್ನಿ ಬಹು ಪ್ರಕಾರವಾಗಿ ಉರಿಯುತ್ತಾನೆ. ಒಬ್ಬನೇ ಸೂರ್ಯ ಎಲ್ಲವನ್ನೂ ಬೆಳಗುತ್ತಾನೆ. ಶತ್ರುನಾಶಕನಾದ ಇಂದ್ರನೂ ಒಬ್ಬನೇ. ಪಿತೃದೇವತೆಗಳಲ್ಲಿ ಯಮನೂ ಒಬ್ಬನೇ. ಈಶ್ವರನೂ ಒಬ್ಬನೇ.

ತಾತ್ಪರ್ಯ : ಅಗ್ನಿ ಮುಂತಾದವರಂತೆ ಜ್ಞಾನ ಎಂಬ ಒಂದೇ ವಸ್ತುವಿದೆ. ಅದೇ ಘಟ, ಪಟಗಳ ರೂಪದಿಂದ ಜಗದಾಕಾರವಾಗಿ ಕಂಡುಬರುವುದು. ಅದು ಸೂರ್ಯನಂತೆ ತನ್ನನ್ನೂ ಇತರ ವಸ್ತುಗಳನ್ನೂ ಪ್ರಕಾಶ ಗೊಳಿಸುವುದು. ಶತ್ರುವೆಂದರೂ ಅದೇ ಜ್ಞಾನ; ಮೃತ್ಯುವೆಂದರೂ ಅದೇ ಜ್ಞಾನ. ಶ್ರೋತ್ರ ಮುಂತಾದ ಇಂದ್ರಿಯಗಳನ್ನು ಪ್ರೇರಿಸತಕ್ಕದ್ದೂ ಅದೇ ಸರಿ. ಆದ್ದರಿಂದ ಜ್ಞಾನ ಎಂಬುದನ್ನು ಬಿಟ್ಟು ಮತ್ತೊಂದು ವಸ್ತುವಿಲ್ಲ.

ಇದು ಬೌದ್ಧಮತ. ಬಂದಿಯು ಇದನ್ನು ಪೂರ್ವಪಕ್ಷವಾಗಿ ಹೇಳಿದ್ದಾನೆ. ಇದಕ್ಕೆ ಅಷ್ಟಾವಕ್ರನ ಉತ್ತರವೇನೆಂದರೆ :-

ಮಿತ್ರರಾಗಿ ಸಂಚರಿಸತಕ್ಕ ಇಂದ್ರಾಗ್ನಿಗಳು ಇಬ್ಬರು. ನಾರದ ಪರ್ವತ ಎಂಬ ದೇವರ್ಷಿಗಳೂ ಇಬ್ಬರು. ಅಶ್ವಿನೀ ದೇವತೆಗಳೂ ಇಬ್ಬರು. ರಥಕ್ಕೆ ಚಕ್ರಗಳೂ ಎರಡು. ಗಂಡ, ಹೆಂಡತಿಯೆಂಬುದಾಗಿ ದಂಪತಿಗಳೂ ಇಬ್ಬರು.

ತಾತ್ಪರ್ಯ : ಬೌದ್ಧಮತ ಸರಿಯಲ್ಲ. ಜ್ಞಾನದೊಂದಿಗೆ ಆತ್ಮಾ ಎಂಬ ವಸ್ತು ಒಂದುಂಟು. ಏಕೆಂದರೆ, ಜ್ಞಾನವೇ ಜ್ಞಾತೃವಾಗಲಾರದು. ಆದ್ದರಿಂದ ಜ್ಞಾತೃ-ವಾದ ಆತ್ಮನನ್ನು ಒಪ್ಪಲೇಬೇಕು. ನಾರದ ಪರ್ವತರೂ ಅಶ್ವಿನೀ ದೇವತೆಗಳೂ ಒಂದೇ ಯೋಗ್ಯತೆ, ರೂಪ ಉಳ್ಳವರಾದ್ದರಿಂದ ಅಭಿನ್ನರಾಗಿ ಸಾಮಾನ್ಯ ಜನರಿಗೆ ತೋರಿದರೂ ಪರಮಾರ್ಥದಲ್ಲಿ ಅವರೊಳಗೂ ಭೇದ ಉಂಟಷ್ಟೆ. ಜ್ಞಾನವನ್ನು ಬಿಟ್ಟು ಆತ್ಮನಿಲ್ಲ. ಆತ್ಮನನ್ನು ಬಿಟ್ಟು ಜ್ಞಾನವಿಲ್ಲ. ಆದಕಾರಣ ಬೌದ್ಧನು ಜ್ಞಾನ

ಒಂದೇ ಇದೆಯೆಂದು ಹೇಳುತ್ತಾನೆ. ಅದು ಸರಿಯಲ್ಲ. ಗಾಡಿಯ ಎರಡು ಚಕ್ರಗಳಂತೆಯೂ, ದಂಪತಿಗಳಂತೆಯೂ ಪರಸ್ಪರಾಪೇಕ್ಷೆ ಇದ್ದರೂ ಅವು ಒಂದೇ ಅಲ್ಲ. ಅವು ಭಿನ್ನ ವಸ್ತುಗಳು. ಆದ್ದರಿಂದ ಆತ್ಮ ಎಂಬ ವಸ್ತುವನ್ನು ಅಂಗೀಕರಿಸಬೇಕು.

ಈ ವಾದಪ್ರಸಂಗದಲ್ಲಿ ಬರುವ ಎರಡು ಶ್ಲೋಕಗಳನ್ನೂ ಮಾದರಿಗಾಗಿ ಉದಾಹರಿಸುತ್ತೇನೆ.

ಬಂದಿ :

**ಸಪ್ತಗ್ರಾಮ್ಯಾಃ ಪಶವಃ ಸಪ್ತವನ್ಯಾಃ ।**
**ಸಪ್ತಚ್ಛಂದಾಂಸಿ ಕ್ರತುಮೇಕಂ ವಹಂತಿ ।**
**ಸಪ್ತರ್ಷಯಃ ಸಪ್ತಚಾಪ್ಯರ್ಹಣಾನಿ ।**
**ಸಪ್ತತಂತ್ರೀ ಪ್ರಥಿತಾ ಚೈವ ವೀಣಾ ॥** (ವನ. ೧೩೩-೧೪)

ಅಷ್ಟಾವಕ್ರ :

**ಅಷ್ಟೌ ಶಾಣಾಃ ಶತಮಾನಂ ವಹಂತಿ**
**ತಥಾಷ್ಟಪಾದಃ ಶರಭಃ ಸಿಂಹಘಾತೀ ।**
**ಅಷ್ಟೌ ವಸೂನ್ ಶುಶ್ರುಮ ದೇವತಾಸು**
**ಯೂಪಶ್ಚಾಷ್ಟಾಶ್ರಿರ್ವಿಹಿತಃ ಸರ್ವಯಜ್ಞೇ ॥** (ವನ. ೧೩೩-೧೫)

ಪರಾಜಿತನಾದ ಬಂದಿ ಪಂಡಿತನನ್ನು ನದಿಯಲ್ಲಿ ಮುಳುಗಿಸಬೇಕೆಂದು ಅಷ್ಟಾವಕ್ರನು ರಾಜನಿಗೆ ಹೇಳಿದನು. ಆಗ ಬಂದಿಯು ''ನಾನು ವರುಣನ ಮಗ. ನದಿಯಲ್ಲಿ ಮುಳುಗಿಸಿದರೆ ನನಗೆ ಯಾವ ಅಪಾಯವೂ ಆಗುವುದಿಲ್ಲ. ಆದರೆ ನಾನು ಸೋತುಹೋದ್ದರಿಂದ ಇದುವರೆಗೆ ಮುಳುಗಿಸಿ ಸಾಯಿಸಿದ-ವರನ್ನೆಲ್ಲಾ ಬದುಕಿಸಬೇಕಾದದ್ದು ನನ್ನ ಕರ್ತವ್ಯ'' ಎಂದು ಹೇಳಿ ತನ್ನ ತಂದೆ-ಯಾದ ವರುಣನನ್ನು ಸ್ತುತಿಸಿದನು. ವರುಣದೇವನ ಅನುಗ್ರಹದಿಂದ ಕಹೋಡ ಮುನಿಯೂ, ಮೃತರಾಗಿದ್ದ ಇತರ ಪಂಡಿತರೂ ಪುನಃ ಬದುಕಿದರು. ಆಗ ಕಹೋಡ ಮುನಿಯು ಮಗನಾದ ಅಷ್ಟಾವಕ್ರನ ಸಾಹಸಕ್ಕೆ ಮೆಚ್ಚಿ ಅಲ್ಲಿದ್ದ ನದಿಯಲ್ಲಿ ಸ್ನಾನಮಾಡಿಸಿದನು. ಅಷ್ಟಾವಕ್ರನ ದೇಹದ ವಕ್ರತೆಗಳೆಲ್ಲಾ ಹೋಗಿ

ಅವನ ಅಂಗಗಳೆಲ್ಲಾ ಸಮನಾದವು. ಆ ನದಿಗೆ ಸಮಂಗಾ ಎಂಬ ಹೆಸರು ಬಂದಿತು.



ಮಾರ್ಕಂಡೇಯ ಋಷಿಗಳು ಯುಧಿಷ್ಠಿರನಿಗೆ ಧರ್ಮೋಪದೇಶವನ್ನು ಮಾಡುವಾಗ ಹೇಳುತ್ತಾರೆ :-

**ಇಹ ವೈಕಸ್ಯ ನಾಮುತ್ರ ಆಮುತ್ರೈಕಸ್ಯ ನೋ ಇಹ ।**
**ಇಹ ವಾಮುತ್ರ ಚೈಕಸ್ಯ ನಾಮುತ್ರೈಕಸ್ಯ ನೋ ಇಹ ॥** (ವನ. ೧೮೩-೮೮)

ಅರ್ಥ : ಏಕಸ್ಯ-ಒಬ್ಬ ಪುರುಷನಿಗೆ, ಇಹ-ಈ ಲೋಕದಲ್ಲಿ ಉಂಟು. ಅಮುತ್ರ-ಪರಲೋಕದಲ್ಲಿ, ನ-ಇಲ್ಲ, ಏಕಸ್ಯ-ಒಬ್ಬನಿಗೆ, ಅಮುತ್ರ-ಪರಲೋಕದಲ್ಲಿ ಉಂಟು. ಇಹ-ಈ ಲೋಕದಲ್ಲಿ, ನೋ-ಇಲ್ಲ. ಏಕಸ್ಯ-ಇನ್ನೊಬ್ಬನಿಗೆ, ಇಹ-ಈ ಲೋಕದಲ್ಲಿಯೂ, ಚ-ಮತ್ತು, ಅಮುತ್ರ-ಪರಲೋಕದಲ್ಲಿಯೂ ಕೂಡ ಉಂಟು. ಏಕಸ್ಯ-ಮತ್ತೊಬ್ಬನಿಗೆ, ಅಮುತ್ರ-ಪರಲೋಕದಲ್ಲಿಯೂ, ನ-ಇಲ್ಲ. ಇಹ-ಈ ಲೋಕದಲ್ಲಿಯೂ ಇಲ್ಲ.

ಮಾರ್ಕಂಡೇಯ ಋಷಿಗಳೇ ಈ ಸಮಸ್ಯೆಯನ್ನು ಬಿಡಿಸುತ್ತಾರೆ. ಹೇಗೆಂದರೆ :-

ಬಹಳ ಐಶ್ವರ್ಯವಂತನಾಗಿ ಭೋಗದಲ್ಲಿ ಮುಳುಗಿರುವ ಮನುಷ್ಯನಿಗೆ ಈ ಲೋಕದಲ್ಲಿ ಸುಖವುಂಟು. ಪುಣ್ಯಕಾರ್ಯವನ್ನು ಮಾಡದೇ ಇರುವ ಪ್ರಯುಕ್ತ ಅವನಿಗೆ ಪರಲೋಕದಲ್ಲಿ ಸುಖವಿಲ್ಲ. ಯೋಗ, ತಪಸ್ಸು, ವೇದಾಧ್ಯಯನ ಮುಂತಾದ ಕಾರ್ಯಗಳಲ್ಲಿ ದೇಹವನ್ನು ಸವೆಯಿಸುತ್ತಾ ಜಿತೇಂದ್ರಿಯನಾದ ಮನುಷ್ಯನಿಗೆ ಈ ಲೋಕದಲ್ಲಿ ಯಾವ ಸುಖವೂ ಇಲ್ಲ. ಅವನಿಗೆ ಪರಲೋಕ-ದಲ್ಲಿತೇ ಸುಖ. ಯಾವನು ಧರ್ಮನಿರತನಾಗಿ ನ್ಯಾಯವಾದ ಮಾರ್ಗದಿಂದ ಹಣವನ್ನು ಸಂಪಾದಿಸಿ ಮದುವೆಮಾಡಿಕೊಂಡು ಯಜ್ಞ, ಯಾಗಾದಿ ಸತ್ಕಾರ್ಯಗಳಲ್ಲಿ ತೊಡಗಿರುವವನೋ ಅವನಿಗೆ ಈ ಲೋಕದಲ್ಲಿಯೂ ಸುಖವುಂಟು. ಪರಲೋಕದಲ್ಲಿಯೂ ಉಂಟು. ಇನ್ನು ಯಾವ ಮನುಷ್ಯನು ವಿದ್ಯೆಯನ್ನೂ ಕಲಿಯದೆ ಗೃಹಸ್ಥನಾಗಿ ತಪೋದಾನಾದಿ ಸತ್ಕರ್ಮಗಳನ್ನೂ

ಮಾಡದೆ ಮೂರ್ಖನಾಗಿ ಇರುವನೋ ಅವನಿಗೆ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ.

ಈ ಅಭಿಪ್ರಾಯವನ್ನೇ ಸೂಚಿಸುವ ಇನ್ನೊಂದು ಸಂದರ್ಭವಿದೆ. ಒಬ್ಬ ಜ್ಞಾನಿಯು ಹೋಗುತ್ತಿರುವಾಗ ಒಬ್ಬ ರಾಜಪುತ್ರನು ಎದುರಿಗೆ ಬಂದು ನಮಸ್ಕರಿಸಿದನು. ಅವನಿಗೆ-

**ರಾಜಪುತ್ರ ಚಿರಂಜೀವ !**

'ರಾಜಕುಮಾರ, ಬಹುಕಾಲ ಬದುಕಿರು' ಎಂದು ಹರಸಿ ಮುಂದೆ ಹೊರಟನು. ಎದುರಿಗೆ ಒಬ್ಬ ಋಷಿಕುಮಾರನು ಬಂದು ವಂದಿಸಿದನು. ಜ್ಞಾನಿಯು-

**ಮಾ ಜೀವ ಮುನಿಪುತ್ರಕ ॥**

''ಋಷಿಕುಮಾರ, ನೀನು ಬದುಕಬೇಡ !' ಎಂದನು. ಅನಂತರ ಒಬ್ಬ ಪುಣ್ಯಶಾಲಿ- ಯಾದ ಗೃಹಸ್ಥನು ಎದುರಾದನು. ಅವನನ್ನು ಕುರಿತು-

**ಜೀವ ವಾ ಮರ ವಾ ಸಾಧೋ ।**

'ಎಲೈ ಸಾಧುಪುರುಷನೆ, ನೀನು ಬದುಕಿರು ಅಥವಾ ಸಾಯಿ. ಎರಡೂ ಒಂದೇ!' ಎಂದು ಹೇಳಿ ಮುಂದೆ ಸಾಗಿದನು. ಅನತರ ಒಬ್ಬ ಕಳ್ಳನು ಎದುರಿಗೆ ಬಂದನು. ಜ್ಞಾನಿಯು ಅವನಿಗೆ-

**ಮಾ ಜೀವ ನ ಚ ಮಾ ಮರ ॥**

'ನೀನು ಬದುಕಲೂ ಬೇಡ, ಸಾಯಲೂ ಬೇಡ !' ಎಂದು ಹೇಳಿ ಮುಂದೆ ಸಾಗಿದನು !

ತಾತ್ಪರ್ಯ : ರಾಜಕುಮಾರ ಕೇವಲ ಭೋಗಾಸಕ್ತ. ಅವನಿಗೆ ಈ ಲೋಕದಲ್ಲಿ ಮಾತ್ರ ಸುಖವಿರುವುದರಿಂದ ಬಹುಕಾಲ ಬದುಕಿರಲಿ. ಋಷಿಪುತ್ರನಿಗೆ ಈ ಲೋಕದಲ್ಲಿ ಸುಖವಿಲ್ಲ. ಪರಲೋಕದಲ್ಲಿ ಮಾತ್ರ ಅವನಿಗೆ ಸುಖ. ಪುಣ್ಯ- ಶಾಲಿಗೆ ಯಾವಾಗಲೂ ಸುಖವೇ. ಆದ್ದರಿಂದ ಅವನು ಬದುಕಿದ್ದರೂ

ಸರಿಯೇ, ಮೃತನಾದರೂ ಸರಿಯೇ. ಭೇದವೇನೂ ಇಲ್ಲ. ಕಳ್ಳನಿಗೆ ಇಲ್ಲಿ ಜೈಲುವಾಸ. ಪರದಲ್ಲಿ ನರಕ. ಅವನಿಗೆ ಎಲ್ಲಿಯೂ ಸುಖವಿಲ್ಲ.



ಮಾರ್ಕಂಡೇಯ ಮುನಿಗಳು ಕಲಿಯುಗದಲ್ಲಿ ಜನರ ಸ್ವಭಾವ ಹೇಗಿರುವು- ದೆಂಬುದನ್ನು ಯುಧಿಷ್ಠಿರನಿಗೆ ವರ್ಣಿಸಿ ಹೇಳುತ್ತಾರೆ.

**ಅಟ್ಟಶೂಲಾ ಜನಪದಾಃ ಶಿವಶೂಲಾಶ್ಚತುಷ್ಪಥಾಃ ।**
**ಕೇಶಶೂಲಾಃ ಸ್ತ್ರಿಯೋ ರಾಜನ್ ಭವಿಷ್ಯಂತಿ ಯುಗಕ್ಷಯೇ ॥**

(ವನ. ೧೮೮-೪೨)

ಈ ಶ್ಲೋಕಕ್ಕೆ ಆಪಾತವಾದ ಅರ್ಥ ಬೇರೆ ಇಲ್ಲ. ವಾಸ್ತವಾರ್ಥವೇ ಎರಡು ಬಗೆಯಾಗಿದ್ದು ಕಠಿಣವಾಗಿದೆ

1. ರಾಜನ್-ಎಲೈ ರಾಜನೆ, ಯುಗಕ್ಷಯೇ-ಕಲಿಯುಗದ ಕಡೆಯಲ್ಲಿ, ಜನಪದಾಃ-ದೇಶಗಳು, ಅಟ್ಟಶೂಲಾಃ-ಅಟ್ಟ-ಅನ್ನವನ್ನು, ಶೂಲಾಃ-ವಿಕ್ರಯ ಮಾಡತಕ್ಕವುಗಳೂ, ಚತುಷ್ಪಥಾಃ-ಬ್ರಾಹ್ಮಣರು, ಶಿವಶೂಲಾಃ-ಶಿವವೇದವನ್ನು, ಶೂಲಾಃ-ಮಾರತಕ್ಕವರೂ, ಸ್ತ್ರಿಯಃ-ಹೆಂಗಸರು, ಕೇಶಶೂಲಾಃ-ಕೇಶ-ತಮ್ಮ ಗುಪ್ತೇಂದ್ರಿಯವನ್ನು, ಶೂಲಾಃ-ಮಾರತಕ್ಕವರೂ, ಭವಿಷ್ಯಂತಿ-ಆಗುವರು.

ತಾತ್ಪರ್ಯ : ದೇಶದಲ್ಲೆಲ್ಲಾ ಹೋಟಲುಗಳು ತುಂಬಿಹೋಗುವುವು. ಬ್ರಾಹ್ಮಣರು ಸಂಬಳಕ್ಕಾಗಿ ವೇದವನ್ನು ಹೇಳಿಕೊಡುತ್ತಾರೆ. ಸ್ತ್ರೀಯರು ಹಣದ ಆಸೆಯಿಂದ ವ್ಯಭಿಚಾರಿಗಳಾಗುತ್ತಾರೆ.

2. ರಾಜನ್-ಎಲೈ ರಾಜನೆ, ಯುಗಕ್ಷಯೇ-ಕಲಿಯುಗದ ಕಡೆಯಲ್ಲಿ, ಜನಪದಾಃ-ದೇಶಗಳು, ಅಟ್ಟ-ಅನ್ನದಿಂದ, ಶೂಲಾಃ-ಹೊಟ್ಟೆ ಶೂಲೆಯುಳ್ಳ-ವುಗಳೂ, ಚತುಷ್ಪಥಾಃ-ಬೀದಿಯ ಚೌಕಗಳು, ಶಿವಶೂಲಾಃ-ವೇದವನ್ನು ಬರೆದ ಪುಸ್ತಕಗಳನ್ನು ಮಾರತಕ್ಕವೂ, ಸ್ತ್ರೀಯಃ-ಸ್ತ್ರೀಯರು, ಕೇಶಶೂಲಾಃ-ತಮ್ಮ ತಲೆ-ಗೂದಲನ್ನು ಶೂಲವೆಂದು ಭಾವಿಸಿ ಕತ್ತರಿಸಿ ಕೊಳ್ಳತಕ್ಕವರೂ ಆಗುತ್ತಾರೆ.

ತಾತ್ಪರ್ಯ : ಆಹಾರ ದೋಷದಿಂದ ಜನರು ನಾನಾ ಬಗೆಯ ಕ್ಷುದ್ರ ವ್ಯಾದಿಗಳನ್ನು ಪಡೆಯುತ್ತಾರೆ. ವೇದದ ಪುಸ್ತಕಗಳು ಬೀದಿಯಲ್ಲಿ ಮಾರಾಟವಾಗುತ್ತವೆ. ಹೆಂಗಸರು ತಮ್ಮ ತಲೆಗೂದಲನ್ನು ಮಾಂಗಲ್ಯವೆಂದು ಭಾವಿಸದೆ ಕತ್ತರಿಸಿಕೊಳ್ಳುತ್ತಾರೆ. ತಮ್ಮ ಮುತ್ತೈದೆತನದ ಬಗ್ಗೆ ಲಕ್ಷ್ಯ ಕೊಡುವುದಿಲ್ಲ.

ಟಿಪ್ಪಣಿ : ಮೇದಿನೀಕೋಶದಲ್ಲಿ ಅಟ್ಟ, ಶೂಲ ಮುಂತಾದ ಶಬ್ದಗಳಿಗೆ ಮೇಲ್ಕಂಡಂತೆ ಎರಡು ಬಗೆಯ ಅರ್ಥಗಳಿವೆಯೆಂದು ಹೇಳಿದೆ.

ಪಾಂಡವರು ವನವಾಸದಲ್ಲಿದ್ದಾಗ 'ಯಕ್ಷಪ್ರಶ್ನೆ' ಎಂಬ ಒಂದು ಪ್ರಸಂಗ ಬರುತ್ತದೆ. ಧರ್ಮಪುರುಷನು ತಾನು ಯಕ್ಷನೆಂದು ಹೇಳಿಕೊಂಡು ಒಂದು ಬಕಪಕ್ಷಿಯ ರೂಪದಿಂದ ಧರ್ಮರಾಜನಿಗೆ ನಾನಾ ಪ್ರಶ್ನೆಗಳನ್ನು ಹಾಕುತ್ತಾನೆ. ಅವುಗಳಿಗೆಲ್ಲಾ ಧರ್ಮರಾಜನು ಸಮಂಜಸವಾದ ಉತ್ತರಗಳನ್ನು ಕೊಡುತ್ತಾನೆ. ಆಗ ಸಂತುಷ್ಟನಾದ ಯಕ್ಷನು ಧರ್ಮರಾಜನನ್ನು ಸ್ತುತಿಸುತ್ತಾನೆ.

**ದಿಷ್ಟ್ಯಾ ಪಂಚಸು ರಕ್ತೋऽಸಿ ದಿಷ್ಟ್ಯಾತೇ ಷಟಪದೀ ಜಿತಾ ।**
**ದ್ವೇ ಪೂರ್ವೇ ಮಧ್ಯಮೇ ದ್ವೇಚ ದ್ವೇಚಾಂತೇ ಸಾಂಪರಾಯಿಕೇ ॥**

(ವನ. ೩೧೪-೯)

ಆಪಾತಾರ್ಥ : ಎಲೈ ಯುಧಿಷ್ಠಿರ, ದಿಷ್ಟ್ಯಾ-ಸುದೈವದಿಂದ, ಪಂಚಸು-ಐದು ವಿಷಯಗಳಲ್ಲಿ, ರಕ್ತೋऽಸಿ-ಅನುರಕ್ತನಾಗಿದ್ದೀಯೆ. ದಿಷ್ಟ್ಯಾ-ಸುದೈವದಿಂದ, ಷಟ್‌ಪದೀ-ಷಟಪದಿಯು, ತೇ-ನಿನ್ನಿಂದ, ಜಿತಾ-ಜಯಿಸಲ್ಪಟ್ಟಿದೆ. ದ್ವೇ-ಎರಡು, ಪೂರ್ವೇ-ಮೊದಲನೆಯವು. ದ್ವೇ-ಎರಡು, ಮಧ್ಯಮೇ-ಮಧ್ಯದಲ್ಲಿರತಕ್ಕವು, ಸಾಂಪರಾಯಿಕೇ-ಯುದ್ಧಕ್ಕೆ ಸಂಬಂಧಿಸಿದ, ದ್ವೇ-ಎರಡು, ಅಂತೇ- ಕೊನೆಯವು.

ವಾಸ್ತವಾರ್ಥ : ಯುಧಿಷ್ಠಿರ, ಸುದೈವದಿಂದ ನೀನು ಪಂಚಸು-ಆತ್ಮಸಾಕ್ಷಾತ್ಕಾರಕ್ಕೆ ಬೇಕಾದ ಶಮ, ದಮ ಉಪರಮ, ತಿತಿಕ್ಷಾ, ಸಮಾಧಾನ-ಗಳೆಂಬ ಐದು ಸಾಧನಗಳಲ್ಲಿ, ರಕ್ತೋऽಸಿ-ಆಸಕ್ತನಾಗಿದ್ದೀಯೆ. (ಅದಕ್ಕೆ ಫಲವಾಗಿ) ತೇ-ನಿನ್ನಿಂದ, ಷಟ್‌ಪದೀ-ಹಸಿವು, ಬಾಯಾರಿಕೆ, ಶೋಕ, ಮೋಹ, ಮುಪ್ಪು, ಮರಣ ಎಂಬ ಷಡೂರ್ಮಿಗಳು, ಜಿತಾ-ಗೆಲ್ಲಲ್ಪಟ್ಟಿವೆ. ಈ

ಊರ್ಮಿಗಳಲ್ಲಿ ದ್ವೇ-ಹಸಿವು, ಬಾಯಾರಿಕೆ ಎಂಬ ಎರಡು, ಪೂರ್ವೇ-ಮೊದಲನೆಯವು. (ಹುಟ್ಟುತ್ತಿದ್ದ ಹಾಗೆಯೇ ಒದಗುತ್ತವೆ) ದ್ವೇ-ಶೋಕ, ಮೋಹಗಳೆಂಬ ಎರಡು, ಮಧ್ಯಮೇ-ಮಧ್ಯದಲ್ಲಿ ಒದಗುತ್ತವೆ. ಸಾಂಪ-ರಾಯಿಕೇ-ಪರಲೋಕವನ್ನು ಸೇರಿಸತಕ್ಕ, ದ್ವೇ-ಮುಪ್ಪು, ಮರಣಗಳು, ಅಂತೇ-ಜೀವನದ ಕೊನೆಯಲ್ಲಿ ಬರತಕ್ಕವು.

ಶೋಕ- ಇಷ್ಟವು ದೊರಕದೇ ಹೋದಾಗಲೂ ಅನಿಷ್ಟವು ಪ್ರಾಪ್ತ-ವಾದಾಗಲೂ ಆಗುವ ವಿಷಾದ ಮೋಹ. ಇದು ಯುಕ್ತ. ಇದು ಅಯುಕ್ತ -ಎಂದು ನಿರ್ಣಯಿಸಲಾರದ ಮನೋವೈಕಲ್ಯ.

ಪಾಂಡವರ ವನವಾಸ ಮುಗಿಯಿತು. ಇನ್ನು ಒಂದು ವರ್ಷ ಅಜ್ಞಾತ ವಾಸವನ್ನು ಎಲ್ಲಿ ಮಾಡಬೇಕೆಂಬ ಜಿಜ್ಞಾಸೆಯಾಗಿ ವಿರಾಟ ನಗರದಲ್ಲಿ ಮಾಡಬೇಕೆಂದು ನಿಶ್ಚಯವಾಯಿತು. ಯಾವ ರೀತಿಯಲ್ಲಿ ವೇಷವನ್ನು ಮರೆಸಿ ಕೊಂಡಿರಬೇಕೆಂಬುದನ್ನೂ ಅವರು ಚರ್ಚಿಸಿದರು. ಧರ್ಮರಾಜನು ತಾನು ಕಂಕ ಭಟ್ಟನೆಂದು ಹೆಸರಿಟ್ಟುಕೊಂಡು ಬ್ರಾಹ್ಮಣವೇಷವನ್ನು ಧರಿಸಿ ವಿರಾಟನ ಆಸ್ಥಾನದಲ್ಲಿರುತ್ತೇನೆಂದು ಹೇಳಿದನು. ಆಮೇಲೆ ಭೀಮಸೇನನು ತನ್ನ ವೇಷವನ್ನು ಹೇಳುತ್ತಾನೆ-

**ಆರಾಲಿಕೋ ಗೋವಿಕರ್ತಾ ಸೂಪಕರ್ತಾ ನಿಯೋಧಕಃ ।**
**ಆಸಂ ಯುಧಿಷ್ಠಿರಸ್ಯಾಹಮಿತಿ ವಕ್ಷ್ಯಾಮಿ ಪೃಚ್ಛತಃ ॥** (ವಿರಾಟ ೨-೯)

ಆಪಾತಾರ್ಥ :- ಅಹಂ-ನಾನು, ಯುಧಿಷ್ಠಿರಸ್ಯ-ಧರ್ಮರಾಯನ ಬಳಿ-ಯಲ್ಲಿ, ಆರಾಲಿಕಃ-ಅಡಿಗೆಯವನಾಗಿ, ಗೋವಿಕರ್ತಾ-ಗೋಹಸುಗಳನ್ನೂ, ಅವಿ-ಕುರಿಗಳನ್ನೂ, ಕರ್ತಾ-ಕತ್ತರಿಸತಕ್ಕವನೂ, ಸೂಪಕರ್ತಾ-ತೊವ್ವೆಯನ್ನು ಮಾಡತಕ್ಕವನೂ, ನಿಯೋಧಕಃ-ಮಲ್ಲಯುದ್ಧ ಮಾಡತಕ್ಕವನೂ, ಆಸಂ-ಆಗಿದ್ದೆನು, ಇತಿ-ಹೀಗೆಂದು, ಪೃಚ್ಛತಃ-(ನನ್ನನ್ನು) ಕೇಳಿದವನಿಗೆ, ವಕ್ಷ್ಯಾಮಿ -ಹೇಳುವೆನು.

ತಾತ್ಪರ್ಯ :- ನಾನು ಹಿಂದೆ ಧರ್ಮರಾಜನಿಗೆ ಅಡಿಗೆಯವನಾಗಿದ್ದೆನು. ಹಸು, ಕುರಿಗಳನ್ನು ಕತ್ತರಿಸಿ ಅಡಿಗೆ ಮಾಡುವುದರಲ್ಲಿಯೂ, ತೊವ್ವೆಯನ್ನು ರುಚಿ-

ಯಾಗಿ ಮಾಡುವುದರಲ್ಲಿಯೂ ಗಟ್ಟಿಗನು. ನಾನು ಕುಸ್ತಿ ಮಾಡತಕ್ಕ ಜಟ್ಟಿಯೂ ಹೌದು ಎಂದು ವಿರಾಟನಿಗೆ ಹೇಳುತ್ತೇನೆ.

ಇಲ್ಲಿ ಒಂದು ಶಂಕೆಯುಂಟಾಗುತ್ತದೆ. ಪಾಂಡವರು ಸತ್ಯವಂತರೆಂದು ಪ್ರಸಿದ್ಧಿ. ಭೀಮನು ವಿರಾಟನಿಗೆ ಸುಳ್ಳು ಹೇಳಬಹುದೆ ? ಧರ್ಮರಾಜನು ಹೀಗೆ ಸುಳ್ಳು ಹೇಳಲು ಅನುಮತಿಯನ್ನು ಕೊಟ್ಟಿರಬಹುದೆ ?

ಇದಕ್ಕೆ ಸಮಾಧಾನವೇನೆಂದರೆ, ಭೀಮಸೇನನ ಮಾತಿಗೆ ಗೂಢವಾದ ಅರ್ಥ ಬೇರೆ ಇದೆ. ಆದ್ದರಿಂದ ಸುಳ್ಳಿನ ಪ್ರಶ್ನೆಗೆ ಇಲ್ಲಿ ಅವಕಾಶವಿಲ್ಲ. ಹೇಗೆಂದರೆ-

ಗೂಢಾರ್ಥ :- ಅಹಂ-ನಾನು, ಯುಧಿಷ್ಠಿರಸ್ಯ-ಧರ್ಮರಾಜನ ಬಳಿಯಲ್ಲಿ, ಆರಾಲಿಕಃ-ಮದ್ದಾನೆಗಳನ್ನು ಯುದ್ಧದಲ್ಲಿ ಜಯಿಸತಕ್ಕವನೂ, ಗೋ ವಿಕರ್ತಾ-ಗೋ-ಹೋರಿಗಳನ್ನು, ವಿಕರ್ತಾ-ನಿಗ್ರಹಿಸತಕ್ಕವನೂ, ಸೂಪ ಕರ್ತಾಸು-ಚೆನ್ನಾಗಿ, ಉಪಕರ್ತಾ-ಉಪಕಾರಮಾಡತಕ್ಕವನೂ, ನಿಯೋಧಕಃ-ಮಹಾಯೋಧನೂ, ಆಸಂ-ಆಗಿದ್ದೆನು, ಇತಿ-ಹೀಗೆಂದು, ಪೃಚ್ಛತಃ-(ನನ್ನನ್ನು) ಕೇಳಿದವನಿಗೆ, ವಕ್ಷ್ಯಾಮಿ-ಹೇಳುವೆನು.

**ಟಿಪ್ಪಣಿ** :- 'ಅರಾಲ'ವೆಂದರೆ ಮದ್ದಾನೆಯೆಂದು ವಿಶ್ವಕೋಶದಲ್ಲಿ ಹೇಳಿದೆ. ಅರಾಲಗಳನ್ನು ಗೆಲ್ಲತಕ್ಕವನು ಆರಾಲಿಕ.

ಧರ್ಮರಾಜನು ಬ್ರಾಹ್ಮಣವೇಷದಿಂದ ವಿರಾಟನ ಬಳಿಗೆ ಬಂದನು. ವಿರಾಟನು ಅವನನ್ನು ಸತ್ಕರಿಸಿ ನೀನು ಯಾರು ? ನಿನ್ನ ವೃತ್ತಾಂತವೇನು? -ಎಂದು ಕೇಳಲಾಗಿ ಧರ್ಮರಾಜನು ಹೇಳುತ್ತಾನೆ-

**ಯುಧಿಷ್ಠಿರಸ್ಯಾಸಮಹಂ ಪುರಾ ಸಖಾ**
**ವೈಯಾಘ್ರಪದ್ಯಃ ಪುನರಸ್ಮಿ ವಿಪ್ರಃ ।**
**ಅಕ್ಷಾನ್ ಪ್ರಯೋಕ್ತುಂ ಕುಶಲೋಽಸ್ಮಿ ದೇವಿನಾಂ**
**ಕಂಕೇತಿ ನಾಮ್ನಾಸ್ಮಿ ವಿರಾಟ ವಿಶ್ರುತಃ ॥** (ವಿರಾಟ 7-12)

ವಿರಾಟ-ಎಲೈ ವಿರಾಟರಾಜನೆ, ಅಹಂ-ನಾನು, ಪುರಾ-ಹಿಂದೆ, ಯುಧಿಷ್ಠಿರಸ್ಯ-ಧರ್ಮರಾಜನಿಗೆ, ಸಖಾ-ಸ್ನೇಹಿತನು, ಆಸಂ-ಆಗಿದ್ದೆನು, ಪುನಃ

ಮತ್ತು, ವೈಯಾಘ್ರಪದ್ಯಃ-ವಾಘ್ರಪಾದ ಗೋತ್ರದಲ್ಲಿ ಹುಟ್ಟಿದ, ವಿಪ್ರಃ-ಬ್ರಾಹ್ಮಣನು, ಅಸ್ಮಿ-ಆಗಿದ್ದೇನೆ. ದೇವಿನಾಂ-ಆಟಗಾರರಲ್ಲಿ, ಅಕ್ಷಾನ್-ಪಗಡೆ ದಾಳಗಳನ್ನು, ಪ್ರಯೋಕ್ತುಂ-ಎಸೆಯುವುದಕ್ಕೆ, ಕುಶಲಃ-ನಿಪುಣನು, ಅಸ್ಮಿ-ಆಗಿದ್ದೇನೆ. ನಾಮ್ನಾ-ಹೆಸರಿನಿಂದ, ಕಂಕೇತಿ-ಕಂಕ ಎಂಬುದಾಗಿ, ವಿಶ್ರುತಃ-ಪ್ರಸಿದ್ಧನು, ಅಸ್ಮಿ-ಆಗಿದ್ದೇನೆ.

ಇಲ್ಲಿಯೂ ಹಿಂದೆ ಹೇಳಿದ ಶಂಕೆಯೇ ಉತ್ಪನ್ನವಾಗಿ ಧರ್ಮರಾಜನೂ ಸುಳ್ಳು ಹೇಳಬೇಕಾಗಿ ಬಂದಿತೆ ಎಂದು ಮನಸ್ಸು ಕಳವಳಗೊಳ್ಳುತ್ತದೆ ಆದರೆ ಈ ಶ್ಲೋಕದ ಗೂಢಾರ್ಥವನ್ನರಿತು ಮನಸ್ಸು ಶಾಂತವಾಗುವುದು.

ಗೂಢಾರ್ಥ :- ವಿರಾಟ-ಎಲೈ ವಿರಾಟನೆ, ಅಹಂ-ನಾನು, ಯುಧಿಷ್ಠಿರಃ-ಯುಧಿಷ್ಠಿರನು; ಪುರಾ-ನಿಶ್ಚಯವಾಗಿಯೂ, ಸಖಾ-ನಿನ್ನ ಸ್ನೇಹಿತನು, ಸ್ಯಾಸಂ-ಆಗಬೇಕೆಂದು ಬಯಸಿದ್ದೇನೆ. ಪುನಃ-ಮತ್ತು, ವೈಯಾಘ್ರಪದ್ಯಃ-ವೈಯಾಘ್ರ-ವ್ಯಾಘ್ರಚರ್ಮದಿಂದ ಪರಿವೃತವಾದ, ಪದ್ಯಃ-ರಥ ಉಳ್ಳವನೂ, ವಿಪ್ರಃ-(ಬಡವರನ್ನು ಧನಧಾನ್ಯಾದಿಗಳಿಂದ) ವಿಶೇಷವಾಗಿ ಪೊರೆಯತಕ್ಕವನೂ, ಅಸ್ಮಿ-ಆಗಿದ್ದೇನೆ.

ಉತ್ತರಾರ್ಧದ ಅರ್ಥ ಹಿಂದಿನಂತೆಯೇ. ಬೃಹದಶ್ವನ ಶಿಷ್ಯನಾದ್ದರಿಂದ ಪಗಡೆಯಾಟದಲ್ಲಿ ಅವನು ನಿಪುಣನೇ ಹೌದು. ಯಮನಿಗೆ 'ಕಂಕ' ಎಂದು ಹೆಸರಿದೆ. ಯಮನ ಮಗನಾದ ಧರ್ಮರಾಜನು ತಂದೆಯ ಹೆಸರನ್ನನುಸರಿಸಿ ತನ್ನನ್ನೂ 'ಕಂಕ' ಎಂದು ಕರೆದುಕೊಳ್ಳುವುದರಲ್ಲಿ ತಪ್ಪೇನೂ ಇಲ್ಲ. 'ಆತ್ಮಾವೈ ಪುತ್ರನಾಮಾಸಿ' ಎಂದು ಶ್ರುತಿ ಇರುವುದರಿಂದ ಧರ್ಮರಾಜನು ಯಮನ ಅಂಶಭೂತನಾಗಿದ್ದಾನೆ.

ಟಿಪ್ಪಣಿ :- ಸ್ಯಾಸಂ ಎಂಬುದು 'ಅಸ್' ಧಾತುವಿನ ಆಶೀರ್ಲಿಙ್ ಉತ್ತಮ ಪುರುಷ ಆರ್ಷವಾದ್ದರಿಂದ ಅದಕ್ಕೆ 'ಭೂ' ಆದೇಶ ಬಂದಿಲ್ಲ.



ಪಾಂಡವರ ಅಜ್ಞಾತವಾಸ ಮುಗಿಯುತ್ತಾ ಬಂದಿತು. ಈ ಸಮಯದಲ್ಲಿ ಅವರನ್ನು ಗುರುತು ಹಿಡಿದು ಮತ್ತೆ ಹನ್ನೆರಡು ವರ್ಷ ವನವಾಸಕ್ಕೆ ನೂಕ-

ಬೇಕೆಂದು ಛಲಗಾರನಾದ ದುರ್ಯೋಧನನು ಹಠ ಹಿಡಿದನು. ಕೀಚಕ ವಧ ವೃತ್ತಾಂತವನ್ನು ಕೇಳಿ ಪಾಂಡವರು ವಿರಾಟ ನಗರದಲ್ಲಿ ಇದ್ದಿರಬೇಕೆಂದು ಅವನಿಗೆ ಪ್ರಬಲವಾದ ಶಂಕೆಯಾಯಿತು. ಕೂಡಲೇ ಭೀಷ್ಮದ್ರೋಣಾದಿ ವೀರರೊಡನೆ ಸೈನ್ಯಸಮೇತನಾಗಿ ಬಂದು ವಿರಾಟನ ಗೋವುಗಳನ್ನು ಸೆರೆ ಹಿಡಿದು ವಿರಾಟನನ್ನು ಕೆಣಕಿದನು. ಉತ್ತರಕುಮಾರನು ಕೌರವರೊಡನೆ ಯುದ್ಧ ಮಾಡುತ್ತೇನೆಂದು ಜಂಬ ಕೊಚ್ಚಿ ಬೃಹನ್ನಳೆಯ ಸಾರಥ್ಯದೊಡನೆ ರಥವೇರಿ ರಣರಂಗಕ್ಕೆ ಧಾವಿಸಿದನು. ಕೌರವ ಸೇನೆಯನ್ನು ದೂರದಲ್ಲಿ ನೋಡುತ್ತಲೇ ಉತ್ತರನು ಹೆದರಿ ನಡುಗಿಹೋದನು. ಅವನು ರಥದಿಂದ ಧುಮುಕಿ ಹಿಂದಿರುಗಿ ಓಡಲು ಪ್ರಾರಂಭಿಸಿದನು. ಆಗ ಬೃಹನ್ನಳೆಯ ವೇಷದಲ್ಲಿದ್ದ ಅರ್ಜುನನು ರಥದಿಂದ ಇಳಿದು ಓಡಿ ಹೋಗಿ ಉತ್ತರನನ್ನು ಹಿಡಿದು ನಿಲ್ಲಿಸಿದನು. ಅವನಿಗೆ ಧೈರ್ಯ ಹೇಳಿ ತಾನೇ ಯುದ್ಧ ಮಾಡುತ್ತೇನೆಂದೂ ಉತ್ತರನು ಸಾರಥಿಯ ಕೆಲಸ ಮಾಡಿದರೆ ಸಾಕೆಂದೂ ತಿಳಿಸಿ ಅವನನ್ನು ಎಳೆತಂದು ಬಲತ್ಕಾರವಾಗಿ ರಥದಲ್ಲಿ ಕುಳ್ಳಿರಿಸಿದನು. ಅಜ್ಞಾತವಾಸಕ್ಕೆ ಪೂರ್ವದಲ್ಲಿ ಪಾಂಡವರು ತಮ್ಮ ಅಸ್ತ್ರಗಳನ್ನೆಲ್ಲಾ ನಗರದ ಹೊರಗೆ ಒಂದು ಶಮೀವೃಕ್ಷದಲ್ಲಿ ಮುಚ್ಚಿಟ್ಟಿದ್ದರು. ಈಗ ಅರ್ಜುನನಿಗೆ ಅಸ್ತ್ರಗಳು ಬೇಕಾದವು. ಉತ್ತರನೊಡನೆ ರಥವನ್ನು ಶಮೀವೃಕ್ಷದ ಕಡೆಗೆ ಓಡಿಸಿದನು.

ಇದೆಲ್ಲವನ್ನೂ ದೂರದಲ್ಲಿಯೇ ಕೌರವಸೇನೆ ವಿಸ್ಮಯದಿಂದ ನೋಡು-ತ್ತಿತ್ತು. ಭೀಷ್ಮ ದ್ರೋಣರಿಗೆ ಸಹ ಈ ವೃತ್ತಾಂತವು ಕುತೂಹಲವನ್ನು ಕೆರಳಿಸಿತು. ದ್ರೋಣಾಚಾರ್ಯರು ಅಲ್ಲಿಗೆ ಬೃಹನ್ನಳೆಯ ವೇಷದಲ್ಲಿ ಅರ್ಜುನನೇ ಬಂದಿದ್ದಾ-ನೆಂದು ನಿಶ್ಚಯಿಸಿ ಬಳಿಯಲ್ಲಿದ್ದ ಭೀಷ್ಮರಿಗೆ ಹೇಳುತ್ತಾರೆ :-

ನದೀಜ ಲಂಕೇಶವನಾರಿಕೇತುಃ
ನಗಾಹ್ವಯೋ ನಾಮ ನಗಾರಿಸೂನುಃ ।
ಏಷೋಽಂಗನಾವೇಷಧರಃ ಕಿರೀಟೀ
ಜಿತ್ವಾ ವ ಯಂ ನೇಷ್ಯತಿ ಚಾದ್ಯ ಗಾವಃ ॥ (ವಿರಾ-39-10)

ಪಾಠಕರಿಗೆ ಭ್ರಮೆಯುಂಟಾಗುವಂತೆ ಈ ಶ್ಲೋಕದಲ್ಲಿ ಶಬ್ದ ವಿನ್ಯಾಸವಿದೆ. ಪದವಿಭಾಗ ಹೇಗೆಂಬುದೇ ಥಟ್ಟನೆ ಹೋರುವುದಿಲ್ಲ. 'ನದೀ ಜಲಂ' 'ಕೇಶವ'

'ವಯಂ' 'ಗಾವಃ' ಎಂಬ ಶಬ್ದಗಳು ಆಪಾತ ಗೋಚರವಾಗುತ್ತವೆ. ಅವುಗಳ ಅನ್ವಯವೆಲ್ಲಿ ಎಂಬುದು ಹೊಳೆಯುವುದಿಲ್ಲ. ''ಕಿರೀಟೀ-ಅರ್ಜುನನು, ವಯಂ ಜಿತ್ವಾ-ನಮ್ಮನ್ನು ಜಯಿಸಿ, ಗಾವಃ-ಹಸುಗಳನ್ನು, ನೇಷ್ಯತಿ-ಒಯ್ಯುವನು'' ಎಂಬ ಅರ್ಥವಿರಬಹುದೇ ಎಂದು ಕ್ಷಣಕಾಲ ಶಂಕೆಯಾಗುವುದು. ಆದರೆ ಅದು ತಪ್ಪೆಂದು ಮಾರನೆಯ ಕ್ಷಣದಲ್ಲಿ ತಿಳಿದು ಬರುವುದು. 'ವಯಂ' 'ಗಾವಃ' ಎಂಬ ಶಬ್ದಗಳು ದ್ವಿತೀಯಾವಿಭಕ್ತಿಯಲ್ಲಿಲ್ಲ; ಪ್ರಥಮಾವಿಭಕ್ತಿಯಲ್ಲಿವೆ. ಆದ್ದರಿಂದ ಈ ಶಬ್ದಗಳಿಗೆ ಅನ್ವಯವೆಲ್ಲಿ? ಎಂಬ ಶಂಕೆ ಪ್ರಬಲಿಸಿ ಮನಸ್ಸು ಗೊಂದಲಕ್ಕೀಡಾಗುವುದು. ಇದೇ ಈ ಶ್ಲೋಕದಲ್ಲಿರುವ ಚಮತ್ಕಾರ.

ವಾಸ್ತವಾರ್ಥ:-(ಹೇ) ನದೀಜ-ಎಲೈ ಭೀಷ್ಮನೆ, ಏಷಃ-ಈತನು, ಲಂಕೇಶವನಾರಿಕೇತುಃ-ಲಂಕೇಶ-ರಾವಣನ, ವನ-ಅಶೋಕವನಕ್ಕೆ, ಅರಿ-ಶತ್ರುವಾದ ಆಂಜನೇಯನು, ಕೇತುಃ-ಧ್ವಜವಾಗಿ ಉಳ್ಳ, ನಾಮ-ನಿಶ್ಚಯವಾಗಿಯೂ, ನಗಾಹ್ವಯಃ-ನಗಮರದ, ಆಹ್ವಯಃ-ಹೆಸರುಳ್ಳ, (ಅರ್ಜುನ ಎಂಬುದೊಂದು ಜಾತಿಯ ಮರವಿದೆ. ಕನ್ನಡದಲ್ಲಿ ಮತ್ತಿ ಮರ ಎನ್ನುತ್ತಾರೆ) ನಗಾರಿ ಸೂನುಃ-ದೇವೇಂದ್ರಪುತ್ರನಾದ, ಕಿರೀಟಿ-ಅರ್ಜುನನೇ ಸರಿ. ಅಂಗನಾ-ವೇಷಧರಃ-ಸ್ತ್ರೀವೇಷಧಾರಿಯಾದ ಈತನು, ಯಂ-ಯಾವ ದುರ್ಯೋಧನನನ್ನು, ಜಿತ್ವಾ-ಗೆದ್ದು, ವಃ-ನಿಮ್ಮ, ಗಾಃ-ಹಸುಗಳನ್ನು, ನೇಷ್ಯತಿ-ಒಯ್ಯುವನೋ, (ತಂ-ಆ ದುರ್ಯೋಧನನನ್ನು) ಅವ-ರಕ್ಷಿಸು.

ತಾತ್ಪರ್ಯ :- ಕಪಿಧ್ವಜನೂ, ದೇವೇಂದ್ರ ಪುತ್ರನೂ ಆದ ಅರ್ಜುನನು ನಮ್ಮನ್ನು ಗೆದ್ದು ಗೋವುಗಳನ್ನು ಬಿಡಿಸಿಕೊಂಡು ಹೋಗುವನು. ಈ ಸಮಯದಲ್ಲಿ ದುರ್ಯೋಧನನನ್ನು ನೀನೇ ರಕ್ಷಿಸಬೇಕು.

ವಿರಾಟನಗರದಲ್ಲಿದ್ದ ಪಾಂಡವರನ್ನು ಗುರುತಿಸಿದರೂ ಕೌರವನಿಗೆ ಪ್ರಯೋಜನವಾಗಲಿಲ್ಲ. ಅಜ್ಞಾತವಾಸದ ಅವಧಿ ಮುಗಿದುಹೋಗಿದೆಯೆಂದು ಭೀಷ್ಮರು ತೀರ್ಪುಕೊಟ್ಟರು. ಮುಂದೆ ರಾಜ್ಯಲೋಭದಿಂದ ಮಹಾಯುದ್ಧ ನಡೆದೀತೆಂದು ಧೃತರಾಷ್ಟ್ರನಿಗೆ ಭೀತಿ ಹುಟ್ಟಿತು. ಅಧರ್ಮಿಗಳಾದ ತನ್ನ ಮಕ್ಕಳಿಗೆ ಜಯ ದೊರೆಯದೆಂದು ಅವನಿಗೆ ಅಂತರಂಗದಲ್ಲಿ ಕಳವಳವಿತ್ತು. ಆದ್ದರಿಂದ

ಚಾಣಾಕ್ಷನಾದ ಆ ವೃದ್ಧನು ಸಂಜಯನನ್ನು ಮಧ್ಯಸ್ಥನನ್ನಾಗಿ ಪಾಂಡವರ ಬಳಿಗೆ ಕಳುಹಿಸಿದನು. ಸಂಜಯನ ಶಾಂತಿವಚನಗಳನ್ನು ಕೇಳಿದ ಮೇಲೆ ಯುಧಿಷ್ಠಿರನು ಹೇಳುತ್ತಾನೆ.

**ಯತ್ರಾಧರ್ಮೋ ಧರ್ಮರೂಪಾಣಿ ಧತ್ತೇ**
**ಧರ್ಮಃ ಕೃತ್ಸ್ನೋ ದೃಶ್ಯತೇಽಧರ್ಮರೂಪಃ ।**
**ಬಿಭ್ರದ್ಧರ್ಮೋಽಧರ್ಮರೂಪಂ ತಥಾ ಚ**
**ವಿದ್ವಾಂಸಸ್ತಂ ಸಂಪ್ರಪಶ್ಯಂತಿ ಬುದ್ಧ್ಯಾ ॥** (ಉದ್ಯೋಗ-28-2)

ಅರ್ಥ :- ಯತ್ರ-ಯಾವ ಪುರುಷನಲ್ಲಿ, ಅಧರ್ಮಃ-ಅಧರ್ಮವು, ಧರ್ಮರೂಪಾಣಿ-ಧರ್ಮದ ರೂಪಗಳನ್ನು, ಧತ್ತೇ-ಧರಿಸುತ್ತದೆಯೋ, ಕೃತ್ಸ್ನಃ-ಎಲ್ಲಾ, ಧರ್ಮಃ-ಧರ್ಮವೂ, ಅಧರ್ಮರೂಪಃ-ಅಧರ್ಮವಾಗಿ, ದೃಶ್ಯತೇ-ಕಾಣುತ್ತದೆಯೋ, ತಥಾ ಚ-ಹಾಗೆಯೇ, ಧರ್ಮಃ-ಧರ್ಮವು, ಅಧರ್ಮ-ರೂಪಂ-ಅಧರ್ಮದ ಸ್ವರೂಪವನ್ನು, ಬಿಭ್ರತ್-ಧರಿಸಿ, (ದೃಶ್ಯತೇ-ಕಾಣುವುದೋ) ತಂ-ಅಂತಹ ಪುರುಷನನ್ನು, ವಿದ್ವಾಂಸಃ-ಪಂಡಿತರು, ಬುದ್ಧ್ಯಾ-ವಿವೇಚನೆಯಿಂದ, ಸಂಪ್ರಪಶ್ಯಂತಿ-ಸರಿಯಾಗಿ ತಿಳಿಯುತ್ತಾರೆ.

ಈ ಶ್ಲೋಕವು ವಿರೋಧಾಭಾಸಗಳಿಂದ ತುಂಬಿದೆ. ಯುಧಿಷ್ಠಿರನ ಆಶಯ-ವೇನೆಂಬುದೇ ತಿಳಿಯುವುದಿಲ್ಲ.

ವಿವರಣೆ :- ಸಂಜಯ, ನೀನು ಹೇಳುವಂತೆ ಧರ್ಮವು ಶ್ರೇಷ್ಠವಾದದ್ದು ಹೌದು. ನಾನು ಧರ್ಮಿಯೋ ಅಧರ್ಮಿಯೋ ಪರೀಕ್ಷಿಸಿ ನೋಡು. ಅಧರ್ಮಿಯಾದರೆ ನಿಂದಿಸು. ಧರ್ಮಾಧರ್ಮಗಳ ಪರೀಕ್ಷೆಯಲ್ಲಿ ಮೂರು ವಿಧವುಂಟು. (1) ಇನ್ನೊಬ್ಬರಿಗೆ ಕೇಡು ಬಯಸಿ ಕೆಲವರು ಅಭಿಚಾರಾದಿ ಕೃತ್ಯಗಳನ್ನು ಮಾಡುತ್ತಾರೆ. ಅವರು ಮಾಡುವ ಮಂತ್ರ, ಜಪಗಳು ಅಧರ್ಮಗಳೇ ಸರಿ. ಅವು ಧರ್ಮಕಾರ್ಯಗಳಂತೆ ಜನರಿಗೆ ಕಂಡುಬರುತ್ತವೆ. (2) ಅಂತರ್ಮುಖಿಗಳಾದ ಯೋಗಿಗಳಿದ್ದಾರೆ. ಅವರು ಲೋಕನಿಂದೆಯನ್ನು ಗಣಿಸದೆ ಸ್ವೇಚ್ಛೆಯಿಂದ ನಡೆದುಕೊಳ್ಳುತ್ತಾರೆ. ಅವರಲ್ಲಿ ರಾಗದ್ವೇಷಗಳಿಲ್ಲ. ಜನರಿಗೆ ಹುಚ್ಚರಂತೆ ತೋರುತ್ತಾರೆ. ಅವರ ಯೋಗಧರ್ಮವು ಇತರರಿಗೆ ಅಧರ್ಮದಂತೆ

ಕಂಡುಬರುತ್ತದೆ. (3) ಇನ್ನು ವರ್ಣಾಶ್ರಮ ಭೇದದಿಂದ ಧರ್ಮವ್ಯವಸ್ಥೆಯುಂಟು. ಒಬ್ಬನಿಗೆ ಧರ್ಮವಾದದ್ದು ಇನ್ನೊಬ್ಬನಿಗೆ ಅಧರ್ಮವಾಗುತ್ತದೆ. ಗೃಹಸ್ಥನಿಗೆ ತಾಂಬೂಲಚರ್ವಣ ಧರ್ಮವಾದರೆ ಬ್ರಹ್ಮಚಾರಿಗೆ ಅಧರ್ಮ; ಸಂನ್ಯಾಸಿಗೆ ಶಿಖಾಯಜ್ಞೋಪವೀತಗಳ ತ್ಯಾಗ ಧರ್ಮವಾದರೆ ಗೃಹಸ್ಥನಿಗೆ ಅಧರ್ಮ. ಅವನ್ನು ಧರಿಸುವುದು ಧರ್ಮ. ಬ್ರಾಹ್ಮಣನಿಗೆ ವೇದಾಧ್ಯಯನ, ಸಂಧ್ಯಾವಂದನೆಗಳು ಧರ್ಮವಾದರೆ ಶೂದ್ರನಿಗೆ ಅಧರ್ಮ. ಈ ಅಂಶಗಳನ್ನೆಲ್ಲಾ ಪರಿಶೀಲಿಸಿ ನಾನು ಪ್ರಕೃತದಲ್ಲಿ ಧರ್ಮಿಯೋ, ಅಧರ್ಮಿಯೋ ಎಂದು ನಿಶ್ಚಯಿಸು. ಹೀಗೆ ಮೂರು ಅರ್ಥಗಳು ಹೊರಡುತ್ತವೆ.



ಸಂಜಯನ ಸಂಧಾನ ನಡೆಯಿತು. ಪಾಂಡವರನ್ನು ಸಮಾಧಾನ ಗೊಳಿಸಲು ಅವನಿಂದ ಸಾಧ್ಯವಾಗಲಿಲ್ಲ. ರಾಜ್ಯವನ್ನು ಕೊಡದಿದ್ದರೆ ಮುಂದೆ ನಡೆಯಬಹುದಾದ ಭೀಷಣ ಯುದ್ಧವಾರ್ತೆಯನ್ನು ಅವರು ಧೃತರಾಷ್ಟ್ರನಿಗೆ ಹೇಳಿಕಳುಹಿಸಿದರು. ಸಂಜಯನು ತಿರುಗಿ ಬಂದು ರಾತ್ರಿಯಲ್ಲಿ ಆ ವೃದ್ಧನನ್ನು ಕಂಡು ತನ್ನ ಸಂಧಾನ ವ್ಯರ್ಥವಾಯಿತೆಂದು ತಿಳಿಸಿದನು. ಮಾರನೆಯ ದಿನ ಸಭಾಮಧ್ಯದಲ್ಲಿ ಪಾಂಡವರು ಹೇಳಿದ ಕ್ರೋಧದೀಪ್ತವಚನಗಳನ್ನು ವಿವರಿಸುತ್ತೇನೆಂದು ಹೇಳಿ ಹೊರಟುಹೋದನು. ಆ ವೃದ್ಧನಿಗೆ ಚಿಂತೆಯಿಂದ ನಿದ್ರೆ ಬರಲಿಲ್ಲ. ಬಹಳ ಚಡಪಡಿಸುತ್ತಾ ವಿದುರನಿಗೆ ಹೇಳಿಕಳಿಸಿದನು. ವಿದುರನು ಬಂದನು. ಧೃತರಾಷ್ಟ್ರನು ತನ್ನ ಚಿಂತೆಯನ್ನು ಅವನಿಗೆ ತಿಳಿಸಿ ಧರ್ಮಸಮ್ಮತವಾದ ನೀತಿಯನ್ನು ತನಗೆ ಹೇಳಬೇಕೆಂದೂ, ಅದರಿಂದಲಾದರೂ ಮನಸ್ಸಿಗೆ ಹಿತವಾಗಬಹುದೆಂದೂ ಹಲುಬಿದನು. ಮಹಾಪ್ರಾಜ್ಞನಾದ ವಿದುರನು ಆಗ ನೀತಿಶಾಸ್ತ್ರವನ್ನು ವಿಸ್ತಾರವಾಗಿ ಬೋಧಿಸಿದನು. ಇದೇ ವಿದುರನೀತಿಯೆಂದು ಪ್ರಸಿದ್ಧವಾಗಿದೆ. ಈ ಭಾಗಕ್ಕೆ ಪ್ರಜಾಗರ ಪರ್ವ ಎಂದು ಹೆಸರು. ಅದರಲ್ಲಿ ಒಂದು ಶ್ಲೋಕ ಹೀಗಿದೆ-

**ಏಕಯಾ ದ್ವೇ ವಿನಿಶ್ಚಿತ್ಯ ತ್ರೀಂಶ್ಚತುರ್ಭಿರ್ವಶೇ ಕುರು ।**
**ಪಂಚ ಜಿತ್ವಾ ವಿದಿತ್ವಾಷಟ್ ಸಪ್ತ ಹಿತ್ವಾ ಸುಖೀ ಭವ ॥**

(ಉದ್ಯೋಗ-34-44)

"ಒಂದರಿಂದ ಎರಡನ್ನು ನಿಶ್ಚಯಿಸಿ ಮೂರನ್ನು ನಾಲ್ಕರಿಂದ ವಶಪಡಿಸಿಕೊ. ಐದನ್ನು ಗೆದ್ದು ಆರನ್ನು ತಿಳಿದು ಏಳನ್ನು ತ್ಯಜಿಸಿ ಸುಖಿಯಾಗು!"

ಈ ಶ್ಲೋಕದ ವಾಸ್ತವಾರ್ಥ ಎರಡು. ಒಂದು ನೀತಿಶಾಸ್ತ್ರ ಪರವಾದದ್ದು; ಇನ್ನೊಂದು ಅಧ್ಯಾತ್ಮಶಾಸ್ತ್ರಪರವಾದದ್ದು. ಇವೆರಡೂ ಧೃತರಾಷ್ಟ್ರನಿಗೆ ಹೇಳ-ಬೇಕಾದುವುಗಳೇ ಸರಿ.

ನೀತಿಶಾಸ್ತ್ರಪರವಾದ ಅರ್ಥ : (1) ಏಕಯಾ-ಉತ್ತಮವಾದ ಬುದ್ಧಿ-ಯಿಂದ, ದ್ವೇ-ಕಾರ್ಯ, ಅಕಾರ್ಯಗಳನ್ನು, ವಿನಿಶ್ಚಿತ್ಯ-ಚೆನ್ನಾಗಿ ಅರಿತು, ತ್ರೀನ್-ಮಿತ್ರ, ಉದಾಸೀನ, ಶತ್ರುಗಳನ್ನು, ಚತುರ್ಭಿಃ-ನಾಲ್ಕು ಉಪಾಯ-ಗಳಿಂದ, ವಶೇಕುರು-ವಶಪಡಿಸಿಕೊ; ಪಂಚ-ಪಂಚೇಂದ್ರಿಯಗಳನ್ನು, ಜಿತ್ವಾ-ಗೆದ್ದು, ಷಟ್-ಆರು ಗುಣಗಳನ್ನು, ವಿದಿತ್ವಾ-ತಿಳಿದು, ಸಪ್ತ-ಏಳು ವ್ಯಸನ-ಗಳನ್ನು, ಹಿತ್ವಾ-ತ್ಯಜಿಸಿ, ಸುಖೀ-ಸುಖವಂತನು, ಭವ-ಆಗು.

ಟಿಪ್ಪಣಿ : ನಾಲ್ಕು ಉಪಾಯಗಳು - ಸಾಮ, ದಾನ, ಭೇದ ಮತ್ತು ದಂಡ ಇವುಗಳಲ್ಲಿ ಮಿತ್ರನನ್ನು ಸಾಮದಿಂದಲೂ, ಉದಾಸೀನನನ್ನು ದಾನ ಭೇದಗಳಿಂದಲೂ, ಶತ್ರುವನ್ನು ಈ ನಾಲ್ಕರಿಂದಲೂ ವಶಪಡಿಸಿಕೊಳ್ಳಬೇಕೆಂದು ನೀತಿಶಾಸ್ತ್ರವು ಹೇಳುತ್ತದೆ.

ಆರು ಗುಣಗಳು :- ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಮತ್ತು ಆಶ್ರಯ.

ಏಳು ವ್ಯಸನಗಳು :- ಹೆಂಗಸರು, ಜೂಜು, ಬೇಟೆ, ಮದ್ಯ, ಕಠೋರವಾದ ಮಾತು, ಕ್ರೂರಶಿಕ್ಷೆ ವಿಧಿಸುವುದು ಮತ್ತು ಹಣವನ್ನು ಪೋಲು ಮಾಡುವುದು.

ಅಧ್ಯಾತ್ಮಪರವಾದ ಅರ್ಥ :- (2) ಏಕಯಾ-ಉತ್ತಮವಾದ ಬುದ್ಧಿಯಿಂದ, ದ್ವೇ-ನಿತ್ಯಾನಿತ್ಯವಸ್ತುಗಳನ್ನು, ವಿನಿಶ್ಚಿತ್ಯ-ಚೆನ್ನಾಗಿ ಅರಿತು, ತ್ರೀನ್-ಕಾಮ, ಕ್ರೋಧ, ಲೋಭಗಳನ್ನು, ಚತುರ್ಭಿಃ-ನಾಲ್ಕೂ ಸಾಧನಗಳಿಂದ, ವಶೇಕುರು-ವಶಪಡಿಸಿಕೊ; ಪಂಚ-ಪಂಚೇಂದ್ರಿಯಗಳನ್ನು, ಜಿತ್ವಾ-ಗೆದ್ದು, ಷಟ್-ಆರು ರೋಗಗಳನ್ನು, ವಿದಿತ್ವಾ-ತಿಳಿದು, ಸಪ್ತ-ಸಪ್ತೇಂದ್ರಿಯಗಳನ್ನು, ಹಿತ್ವಾ-ತ್ಯಜಿಸಿ, ಸುಖೀ-ಸುಖವಂತನು, ಭವ-ಆಗು.

ಟಿಪ್ಪಣಿ :- ನಾಲ್ಕು ಸಾಧನಗಳು :- ಶಮ, ದಮ, ಉಪರಮ, ಶ್ರದ್ಧೆ.

ಆರು ರೋಗಗಳು :- ಹಸಿವು, ಬಾಯಾರಿಕೆ, ಶೋಕ, ಮೋಹ, ಮುಪ್ಪು, ಮರಣ.

ಸಪ್ತೇಂದ್ರಿಯಗಳು :- ಪಂಚಜ್ಞಾನೇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ.

ವಿದುರನ ನೀತಿಬೋಧೆಯಿಂದ ಧೃತರಾಷ್ಟ್ರನಿಗೆ ಆನಂದವಾಯಿತು. ಎಷ್ಟು ಕೇಳಿದರೂ ತೃಪ್ತಿಯಾಗಲಿಲ್ಲ. 'ವಿದುರ, ನೀನು ಹೇಳಬೇಕಾದದ್ದು ಇನ್ನೂ ಇದ್ದಂತೆ ತೋರುತ್ತದೆ. ಅದನ್ನೆಲ್ಲಾ ನನಗೆ ಹೇಳು. 'ವಿಚಿತ್ರಾಣಿ ಹಿ ಭಾಷಸೇ' ಎಂದನು. ಅದಕ್ಕೆ ವಿದುರನು ''ಧೃತರಾಷ್ಟ್ರ, ಇನ್ನು ಉಳಿದಿರುವುದು ಬ್ರಹ್ಮವಿದ್ಯೆ. ಅದನ್ನು ಶೂದ್ರನಾದ ನಾನು ಉಪದೇಶಿಸಕೂಡದು; ಅದಕ್ಕೆ ನನಗೆ ಅಧಿಕಾರವಿಲ್ಲ. ಮಹರ್ಷಿಗಳೂ ಜ್ಞಾನಿಗಳೂ ಆದ ಸನತ್ಸುಜಾತರು ಅದನ್ನು ನಿನಗೆ ಉಪದೇಶಿಸುವರು'' ಎಂದು ಹೇಳಿ ಸನತ್ಸುಜಾತರನ್ನು ಭಕ್ತಿಯಿಂದ ಧ್ಯಾನಮಾಡಿದನು. ಸನತ್ಸುಜಾತರು ಪ್ರತ್ಯಕ್ಷರಾದರು. ವಿದುರನ ಪ್ರಾರ್ಥನೆಯಂತೆ ಆ ಮಹರ್ಷಿಗಳು ಧೃತರಾಷ್ಟ್ರನಿಗೆ ಬ್ರಹ್ಮವಿದ್ಯೆಯನ್ನು ಬೋಧಿಸಿದರು. ಇದು 'ಸನತ್ಸುಜಾತೀಯ'ವೆಂದು ಪ್ರಸಿದ್ಧವಾಗಿದೆ. ವೇದಾಂತ ವಿಷಯವಾದ್ದರಿಂದ ಈ ಭಾಗವೆಲ್ಲಾ ಕ್ಲಿಷ್ಟವಾಗಿದೆ. ಈ ಪರ್ವದ ಕಡೆಯ ಶ್ಲೋಕ ಒಂದನ್ನು ಪ್ರಕೃತದಲ್ಲಿ ಉದಾಹರಿಸಬಹುದು. ಸನತ್ಸುಜಾತರು ಹೇಳುತ್ತಾರೆ :-

**ವಿಷಂ ಭುಂಕ್ಷ್ವ ಸಹಾಮಾತ್ಯೈಃ ವಿನಾಶಂ ಪ್ರಾಪ್ನುಹಿ ಧ್ರುವಂ ।**
**ರಾಜನ್ ಕೇನ ವಿನಾ ನಾಭ್ಯಾಂ ಸ್ಫೀತಂ ಕೃಷ್ಣಾಜಿನಂ ವರಂ ॥**

ಆಪಾತಾರ್ಥ :- ರಾಜನ್-ರಾಜನೆ, ಅಮಾತ್ಯೈಃ ಸಹ-ಶಕುನಿ ಮುಂತಾದ ಮಂತ್ರಿಗಳೊಡನೆ, ವಿಷಂ-ವಿಷವನ್ನು, ಭುಂಕ್ಷ್ವ-ತಿನ್ನು, ಧ್ರುವಂ-ನಿಶ್ಚಯವಾಗಿಯೂ, ವಿನಾಶಂ-ವಿನಾಶವನ್ನು, ಪ್ರಾಪ್ನುಹಿ-ಪಡೆ; ಕೇನ-ರಾಜ್ಯಸುಖದಿಂದ, ವಿನಾ-ಹೊರತಾಗಿ, ನಾಭ್ಯಾಂ-ಕ್ಷತ್ರಿಯ ಕುಲದಲ್ಲಿ ಹುಟ್ಟಿದ ನಿನಗೆ, ಸ್ಫೀತಂ-ದೊಡ್ಡದಾದ, ಕೃಷ್ಣಾಜಿನಂ-ಜಿಂಕೆಯ ಚರ್ಮವೇ, ವರಂ-ಶ್ರೇಷ್ಠವಾದದ್ದು.

ತಾತ್ಪರ್ಯ :- ಧೃತರಾಷ್ಟ್ರ, ನಿನ್ನ ಆಪ್ತರೊಂದಿಗೆ ನೀನು ವಿಷವನ್ನು ತಿಂದು ಆತ್ಮಹತ್ಯೆ ಮಾಡಿಕೊಳ್ಳುವುದು ಒಳ್ಳೆಯದು. ಕಣ್ಣೆದುರಿಗೆ ಪುತ್ರ, ಪೌತ್ರರ ಮರಣವನ್ನು ನೋಡುತ್ತಾ ಏಕೆ ಬದುಕಿರುವೆ ? ಆತ್ಮಹತ್ಯೆ ಮಾಡಿಕೊಳ್ಳಲು ಇಚ್ಛೆಯಿಲ್ಲದಿದ್ದದೆ ಕೃಷ್ಣಾಜಿನವನ್ನು ಧರಿಸಿ ನೀನು ಕಾಡಿಗೆ ಹೋಗುವುದು ಒಳ್ಳೆಯದು. ಏಕೆಂದರೆ, ಕ್ಷತ್ರಿಯ ಕುಲದಲ್ಲಿ ಹುಟ್ಟಿದ ನಿನಗೆ ಈ ವಯಸ್ಸಿನಲ್ಲಿ ತಪಸ್ಸು ಮಾಡುವುದೇ ಶ್ರೇಯಸ್ಕರ.

ಸತ್ಯವಾದರೂ ಇಂತಹ ಕಠೋರವಾದ ಅಪ್ರಿಯವನ್ನು ಸನತ್ಸುಜಾತರು ನುಡಿಯಬಹುದೇ ಎಂದು ಮನಸ್ಸು ವ್ಯಾಕುಲಗೊಳ್ಳುವುದು. ಆದರೆ ನಿಜವಾದ ಆಶಯ ಬೇರೆ.

ಗೂಢಾರ್ಥ :- ರಾಜನ್-ರಾಜನೆ, ಸ್ಫೀತಂ-ವಿಶಾಲವಾದ, ಕೃಷ್ಣಾಜಿನಂ-ಕೃಷ್ಣಾಜಿನವನ್ನು, ಅಮಾತ್ಯೈಃ ಸಹ-ಮಂತ್ರಿಗಳೊಡನೆ, ವರಂ-ಚೆನ್ನಾಗಿ, ಭುಂಕ್ಷ್ವ-ಪಾಲಿಸು. ಎಂತಹ ಕೃಷ್ಣಾಜಿನ ? ವಿಷಂ-ಷಕಾರವಿಲ್ಲದ್ದು; ಕೇನ ವಿನಾ-ಕಕಾರವಿಲ್ಲದ್ದು; ನಾಭ್ಯಾಂ ವಿನಾ-ಎರಡು ನಕಾರಗಳಿಲ್ಲದ್ದು. ಶಂ-ಸುಖವನ್ನು, ಧ್ರುವಂ-ಚಿರಕಾಲದವರೆಗೆ, ಪ್ರಾಪ್ನುಹಿ-ಪಡೆ.

ಷಕಾರ ಕಕಾರಗಳೂ, ಎರಡು ನಕಾರಗಳೂ ಇಲ್ಲದ 'ಕೃಷ್ಣಾಜಿನ' ವೆಂದರೇನು? ಋ+ಆಜ+ಅ; ಸಂಧಿಮಾಡಿದರೆ 'ರಾಜ್ಯ' ಎಂಬ ರೂಪವಾಗುತ್ತದೆ !

ತಾತ್ಪರ್ಯ :- ಧೃತರಾಷ್ಟ್ರ, ಮಂತ್ರಿಗಳೊಡನೆ ನೀನು ರಾಜ್ಯವನ್ನು ಪಾಲಿಸುತ್ತಿರು. ಶಾಶ್ವತವಾದ ಸುಖ ನಿನಗೆ ದೊರಕಲಿ.

ಟಿಪ್ಪಣಿ :- ಭುಜ್ ಧಾತುವಿಗೆ ತಿನ್ನು, ಪಾಲಿಸು ಎಂಬ ಎರಡು ಅರ್ಥಗಳೂ ಉಂಟು. ಕೃಷ್ಣಾಜಿನ ಶಬ್ದದಲ್ಲಿರುವ ಣಕಾರ ವಾಸ್ತವವಾಗಿ ನಕಾರವೇ ಸರಿ. ಷಕಾರಕ್ಕೆ ಮುಂದಿರುವುದರಿಂದ ಅದು ಣಕಾರವಾಗಿದೆ. ಆದ್ದರಿಂದ ಈ ಣಕಾರವನ್ನು ಸೇರಿಸಿಕೊಂಡು ಎರಡು ನಕಾರಗಳೆಂದು ಹೇಳಿದ್ದಾರೆ.



ಶ್ರೀಕೃಷ್ಣನ ಸಂಧಾನಪ್ರಯತ್ನ ಮುರಿದು ಬಿದ್ದಿತು. ಭಾರತಯುದ್ಧ ಪ್ರಾರಂಭವಾಯಿತು. ಕೌರವಸೇನಾಧಿಪತಿಯಾಗಿ ಭೀಷ್ಮನಿಗೆ ಅಭಿಷೇಕ ವಾಯಿತು. ಭೀಷ್ಮನ ಪರಾಕ್ರಮವನ್ನು ಎದುರಿಸಲು ಪಾಂಡವರಿಗೆ ಸಾಧ್ಯ-ವಾಗಲಿಲ್ಲ. ಅಸಂಖ್ಯಾತವಾಗಿ ಪಾಂಡವಸೇನೆಯನ್ನು ಅವನು ಕೊಂದು ಹಾಕುತ್ತಿದ್ದನು. ಹತ್ತುದಿನ ಕಳೆಯಿತು. ಪಾಂಡವರು ತಲ್ಲಣಿಸಿಹೋದರು. ಆದರೆ ಭೀಷ್ಮನಿಗೆ ಯುದ್ಧದಲ್ಲಿ ವೈರಾಗ್ಯ ಹುಟ್ಟಿತು. ತನ್ನ ಮೊಮ್ಮಕ್ಕಳು ತನ್ನೆದುರಿಗೆ ಹೊಡೆದಾಡುವುದನ್ನೂ, ಕುಲಕ್ಷಯವನ್ನೂ ಆ ವೃದ್ಧನು ನೋಡ-ಲಾರದೆ ಹೋದನು. ತಾನು ಈ ಲೋಕವನ್ನು ತ್ಯಜಿಸುವುದೇ ಯುಕ್ತವೆಂದು ಆತನಿಗೆ ಹೊಳೆಯಿತು. ಭೀಷ್ಮನು ಸ್ವೇಚ್ಛಾಮರಣ ಶಕ್ತಿಯುಳ್ಳವನು. ಅವನನ್ನು ಗೆಲ್ಲುವವರು ಮೂರುಲೋಕದಲ್ಲಿ ಯಾರೂ ಇಲ್ಲ. ಪಾಂಡವರ ಗತಿಯೇನು? ಪಾಂಡವರನ್ನು ವಧಿಸಿ ದುರ್ಮಾರ್ಗದಲ್ಲಿ ಹೆಜ್ಜೆಯಿಟ್ಟ ಕೌರವರಿಗೆ ರಾಜ್ಯವನ್ನು ಸಂಪಾದಿಸಿ ಕೊಡಲು ಆತನಿಗೆ ಮನಸ್ಸು ಬರಲಿಲ್ಲ. ಯುಧಿಷ್ಠಿರನನ್ನು ಕರೆದು ಹೇಳಿದನು- ''ದ್ರುಪದರಾಜನ ಮಗನಾದ ಶಿಖಂಡಿಯನ್ನು ಮುಂದಿಟ್ಟು-ಕೊಂಡು ಯುದ್ಧ ಮಾಡಿರಿ. ನಾನು ಅವನ ಮೇಲೆ ಅಸ್ತ್ರವನ್ನು ಎತ್ತುವುದಿಲ್ಲ. ಆಗ ನೀವು ನನ್ನನ್ನು ವಧಿಸಬಹುದು.''

ಶಿಖಂಡಿಯು ಹುಟ್ಟುವಾಗ ಸ್ತ್ರೀಯಾಗಿದ್ದನು. ಆಮೇಲೆ ಯಕ್ಷನ ವರದಿಂದ ಅವನು ಪುರುಷನಾಗಿದ್ದನು. ಈ 'ಸ್ತ್ರೀ-ಪುರುಷ'ನ ಮೇಲೆ ಅಸ್ತ್ರವನ್ನೆತ್ತಲು ವೀರಕ್ಷತ್ರಿಯನಾದ ಭೀಷ್ಮನಿಗೆ ಇಷ್ಟವಿರಲಿಲ್ಲ. ಶಿಖಂಡಿಯನ್ನು ಮುಂದಿಟ್ಟು-ಕೊಂಡು ಪಾಂಡವರು ಭೀಷ್ಮನನ್ನು ಮುತ್ತಿದರು. ಮುಖ್ಯವಾಗಿ ಭೀಷ್ಮನಿಗೂ ಅರ್ಜುನನಿಗೂ ಯುದ್ಧ ಪ್ರಾರಂಭವಾಯಿತು. ಅರ್ಜುನನ ಮುಂದೆ ಶಿಖಂಡಿಯು ನಿಂತು ಭೀಷ್ಮನ ಮೇಲೆ ಬಾಣಗಳನ್ನೆಸೆಯುತ್ತಿದ್ದನು. ಭೀಷ್ಮನು ಶಿಖಂಡಿಯ ಬಾಣಗಳನ್ನು ಕತ್ತರಿಸದೆ ಅರ್ಜುನನ ಬಾಣಗಳನ್ನು ಮಾತ್ರ ಕತ್ತರಿಸುತ್ತಿದ್ದನು. ತನ್ನ ಮರಣಕ್ಕೆ ಒಂದು ನೆವವನ್ನು ಬಯಸುತ್ತಿದ್ದ ಭೀಷ್ಮನು ಅರ್ಜುನನೊಡನೆ ಮನಸ್ಸಿಟ್ಟು ಯುದ್ಧ ಮಾಡಲಿಲ್ಲ. ಅರ್ಜುನನ ಕೈ ಮೇಲಾಗುತ್ತಾ ಬಂದಿತು. ಅವನ ನಿಶಿತಾಸ್ತ್ರಗಳು ಭೀಷ್ಮನ ಕವಚವನ್ನು ಭೇದಿಸಿ ಶರೀರದಲ್ಲಿ ತೂರಿಕೊಂಡವು. ಶರೀರದ ತುಂಬಾ ಅರ್ಜುನನ ಬಾಣಗಳು

ನೆಟ್ಟುಹೋದುವು. ಭೀಷ್ಮನಿಗೆ ಅಸಹ್ಯವಾದ ಯಾತನೆಯಾಗುತ್ತಿತ್ತು. ಆದರೂ ಬಳಿಯಲ್ಲಿದ್ದ ದುಃಶಾಸನನಿಗೆ ಮುಗುಳುನಗೆಯನ್ನು ಬೀರುತ್ತಾ ಹೇಳುತ್ತಾನೆ :-

**ಅರ್ಜುನಸ್ಯ ಇಮೇ ಬಾಣಾಃ ನೇಮೇ ಬಾಣಾಃ ಶಿಖಂಡಿನಃ ।**
**ಕೃಂತಂತಿ ಮಮ ಗಾತ್ರಾಣಿ ಮಾಘಮಾಂ ಸೇಗವಾ ಇವ ॥**

(ಭೀಷ್ಮ- 119-65)

ಅರ್ಥ :- ದುಃಶಾಸನ, ನನ್ನ ಅಂಗಗಳನ್ನು ಭೇದಿಸುತ್ತಿರುವ ಈ ಬಾಣಗಳು ಅರ್ಜುನನವು; ಶಿಖಂಡಿಯವಲ್ಲ. ಹೇಗೆ ಭೇದಿಸುತ್ತವೆಂದರೆ, ''ಮಾಘಮಾಂ ಸೇಗವಾ ಇವ''.

ಈ ಉಪಮಾನ ವಾಕ್ಯದಲ್ಲಿ ಬಿಗಿಯಿದೆ. ಸುಲಭವಾಗಿ ಅರ್ಥವಾಗುವುದಿಲ್ಲ. 'ಮಾಘಮಾಂಸ, ಗವಾ' ಶಬ್ದಗಳ ಅರ್ಥವೇನೆಂದು ಮನಸ್ಸು ಗೊಂದಲಕ್ಕೀಡಾಗುವುದು.

ಈ ವಾಕ್ಯದ ಅರ್ಥ ಹೀಗೆ :- ಮಾಘಮಾಂ-ಸೇಗವಾಃ ಎಂದು ಪದಚ್ಛೇದ. ಮಾಘಮಾ- ಹೆಣ್ಣು ಏಡಿ, ಸೇಗವಾಃ- ಏಡಿಯ ಮರಿಗಳು. ಏಡಿಯ ಮರಿಗಳು ಹುಟ್ಟುವಾಗ ತಾಯಿಯ ಗರ್ಭವನ್ನು ಭೇದಿಸಿಕೊಂಡು ಹೊರಕ್ಕೆ ಬರುತ್ತವೆ. ತಾಯಿಯು ಹೊಟ್ಟೆಯೊಡೆದು ಸತ್ತುಹೋಗುತ್ತದೆ. ಏಡಿಯ ಮರಿಗಳು ತಾಯಿಯನ್ನು ಭೇದಿಸಿಕೊಂಡು ಹೊರಕ್ಕೆ ಬರುವಂತೆ ಅರ್ಜುನನ ಬಾಣಗಳು ನನ್ನ ದೇಹವನ್ನು ಭೇದಿಸುತ್ತವೆ ಎಂದು ತಾತ್ಪರ್ಯ.

ಟಿಪ್ಪಣಿ :- 'ಮಾಘಮಾ ಕರ್ಕಟೀ ಪ್ರೋಕ್ತಾ ತದಪತ್ಯಂ ತು ಸೇಗವಾ' ಎಂದು ಕೋಶವಿದೆ



ಖಾಂಡವದಹನ ಕಾಲದಲ್ಲಿ ಒಂದು ಹೆಣ್ಣು ಸರ್ಪವು ತನ್ನ ಪುತ್ರನನ್ನು ಅಗ್ನಿಯಿಂದ ತಪ್ಪಿಸುವುದಕ್ಕಾಗಿ ಅದನ್ನು ನುಂಗಿಕೊಂಡು ಅಂತರಿಕ್ಷಕ್ಕೆ ನೆಗೆಯಿತು. ಅರ್ಜುನನು ಅಸ್ತ್ರದಿಂದ ಅದರ ತಲೆಯನ್ನು ಕತ್ತರಿಸಿದನು. ತಾಯಿಸರ್ಪವು ಸತ್ತುಹೋಯಿತು. ಅದರ ಪುತ್ರನಾದ ಸರ್ಪ ಉಳಿದುಕೊಂಡಿತ್ತು.

ಅದು ಅರ್ಜುನನ ಮೇಲೆ ಸೇಡು ತೀರಿಸಿಕೊಳ್ಳಲು ಕರ್ಣನ ಬತ್ತಳಿಕೆಯಲ್ಲಿ ಹೋಗಿ ಸೇರಿಕೊಂಡಿತು. ಮುಂದೆ ಭಾರತಯುದ್ಧದಲ್ಲಿ ಕರ್ಣಾರ್ಜುನರಿಗೆ ಘೋರಯುದ್ಧ ನಡೆಯುತ್ತಿದ್ದಿತು. ಕರ್ಣನು ಈ ಸರ್ಪಾಸ್ತ್ರವನ್ನು ಧನುಸ್ಸಿಗೆ ಹೂಡಿದನು. ಅರ್ಜುನನ ಗತಿ ಏನಾಗುವುದೋ ಎಂದು ಎಲ್ಲರೂ ಹೆದರಿದರು. ಕರ್ಣನು ಅರ್ಜುನನ ಕಂಠಕ್ಕೆ ಗುರಿ ಇಟ್ಟು ಈ ಅಸ್ತ್ರವನ್ನು ಬಿಟ್ಟನು. ಅಷ್ಟರಲ್ಲಿ ಶ್ರೀಕೃಷ್ಣನು ಅರ್ಜುನನ ರಥವನ್ನು ಅದುಮಿ ನೆಲದಲ್ಲಿ ಸ್ವಲ್ಪ ಭಾಗ ಹೂತುಬಿಟ್ಟನು. ಸರ್ಪಾಸ್ತ್ರವು ಅರ್ಜುನನ ದಿವ್ಯ ಕಿರೀಟವನ್ನು ಹಾರಿಸಿಕೊಂಡು ಹೋಯಿತು. ಅರ್ಜುನನು ಪಾರಾದನು. ಆ ಸಂದರ್ಭದಲ್ಲಿ ಈ ಶ್ಲೋಕ ಬರುತ್ತದೆ :-

**ಗೋಕರ್ಣಾ ಸುಮುಖೀ ಕೃತೇನ ಇಷುಣಾ ಗೋಪುತ್ರಸಂಪ್ರೇಷಿತಾ**
**ಗೋಶಬ್ದಾತ್ಮಜಭೂಷಣಂ ಸುವಿಹಿತಂ ಸುವ್ಯಕ್ತಗೋಸುಪ್ರಭಮ್ ।**
**ದೃಷ್ಟ್ವಾ ಗೋಗತಕಂ ಜಹಾರ ಮುಕುಟಂ ಗೋಶಬ್ದಗೋಪೂರಿ ವೈ**
**ಗೋಕರ್ಣಾಸನಮರ್ದನಶ್ಚ ನ ಯಯಾವಪ್ರಾಪ್ಯ ಮೃತ್ಯೋರ್ವಶಮ್ ॥**
(ಕರ್ಣ- 8-42)

ಗೋಶಬ್ದಕ್ಕೆ ನಾನಾರ್ಥಗಳಿವೆ. ಆದ್ದರಿಂದ ಈ ಶ್ಲೋಕ ಕ್ಲಿಷ್ಟವಾಗಿದೆ.

ಅರ್ಥ :- ಸುಮುಖೀ-ಉತ್ತಮವಾದ ಮುಖವುಳ್ಳ, ಗೋಕರ್ಣಾ-ಹೆಣ್ಣುಸರ್ಪವು, ಕೃತೇನ-ತನ್ನಿಂದ ನಿರ್ಮಿತವಾದ, ಇಷುಣಾ-ಅಸ್ತ್ರರೂಪವಾದ ತನ್ನ ಪುತ್ರನ ಮೂಲಕ, ಗೋಪುತ್ರ ಸಂಪ್ರೇಷಿತಾ-ಗೋ(ಮತ್)-ಸೂರ್ಯನ, ಪುತ್ರ-ಮಗನಾದ ಕರ್ಣನಿಂದ, ಸಂಪ್ರೇಷಿತಾ-ಬಿಡಲ್ಪಟ್ಟು, ಸುವ್ಯಕ್ತ-ಚೆನ್ನಾಗಿ ಪ್ರಕಟವಾದ, ಗೋ-ತೇಜಸ್ಸಿನಿಂದಲೂ, ಅಸು-ಪ್ರಾಣಶಕ್ತಿಯಿಂದಲೂ, ಸುಪ್ರಭಂ-ಪ್ರಕಾಶಿಸುತ್ತಿರುವ ಅರ್ಜುನನನ್ನು, ಗೋಗತಕಂ-ಗೋ-ಕುದುರೆಯ ಕೇಸರಗಳಲ್ಲಿ, ಗತ-ಮರೆಯಾದ, ಕಂ-ಶಿರಸ್ಸುಳ್ಳವನನ್ನಾಗಿ, ದೃಷ್ಟ್ವಾ-ನೋಡಿ-ದರೂ, ಗೋಶಬ್ದಾತ್ಮಜಭೂಷಣಂ-ಗೋ ಶಬ್ದಾ-ಅದಿತಿಯು, ಆತ್ಮಜ -ಮಗನಾದ ದೇವೇಂದ್ರನ, ಭೂಷಣಂ-ಅಲಂಕಾರವಾದ, ಗೋಶಬ್ದ-ಗೋಪೂರಿ-ಗೋಶಬ್ದ-ಸೂರ್ಯನದೋ ಎಂಬಂತಿರುವ, ಗೋ-ಕಿರಣಗಳಿಂದ, ಪೂರಿ-

ವ್ಯಾಪಿಸಿರುವ, ಮುಕುಟಂ-ಅರ್ಜುನನ ಕಿರೀಟವನ್ನು, ವೈ-ನಿಶ್ಚಯ- ವಾಗಿ, ಜಹಾರ-ಅಪಹರಿಸಿಕೊಂಡು ಹೋಯಿತು. ಗೋಕರ್ಣಾಸನ ಮರ್ದನಃ -ಗೋಕರ್ಣ-ಸರ್ಪವನ್ನು, ಅಸನ-ಬಾಣಕ್ಷೇಪದಿಂದ, ಮರ್ದನಃ-ಕತ್ತರಿಸಿ ಹಾಕಿದ ಅರ್ಜುನನು, ಅಪ್ರಾಪ್ಯ-(ಸರ್ಪಾಸ್ತ್ರವನ್ನು) ಪಡೆಯದೆ (ಎಂದರೆ-ಸರ್ಪಾಸ್ತ್ರದಿಂದ ತಪ್ಪಿಸಿಕೊಂಡು) ಮೃತ್ಯೋಃ-ಮೃತ್ಯುವಿನ, ವಶಂ-ಸ್ವಾಧೀನತೆ-ಯನ್ನು, ನ ಯಯೌ-ಹೊಂದಲಿಲ್ಲ.

ತಾತ್ಪರ್ಯ :- ಕರ್ಣನು ಸರ್ಪಾಸ್ತ್ರವನ್ನು ಅರ್ಜುನನ ಕತ್ತಿಗೆ ಗುರಿ ಇಟ್ಟಿದ್ದನು. ಶ್ರೀಕೃಷ್ಣನು ರಥವನ್ನು ಭೂಮಿಯಲ್ಲಿ ಅದುಮಿ ತಗ್ಗಿಸಿದುದರಿಂದ ಸರ್ಪಾಸ್ತ್ರವು ಅರ್ಜುನನ ಕಿರೀಟವನ್ನು ಅಪಹರಿಸಿತು. ಕುದುರೆಗಳು ಮೊಳಕಾಲುಗಳನ್ನು ಊರಿ ನಿಂತುಕೊಂಡಿದ್ದವು. ಅವುಗಳ ಕೇಸರಕ್ಕೆ ನೇರವಾಗಿ ಅರ್ಜುನನ ಶಿರಸ್ಸು ಇತ್ತು. ಅದನ್ನು ನೋಡಿದರೂ ವೇಗಾತಿಶಯದಿಂದ ಬಂದ ಸರ್ಪಕ್ಕೆ ಬಗ್ಗುವು-ದಕ್ಕೆ ಆಗಲಿಲ್ಲ. ಆದ್ದರಿಂದ ಅರ್ಜುನನ ಶಿರಸ್ಸು ಉಳಿಯಿತು. ಸರ್ಪವು ಗುರಿತಪ್ಪಿತೆಂದು ವಿಷಾದದಿಂದ ಪುನಃ ಕರ್ಣನ ಬಳಿಗೆ ಹೋಗಲು ಅವನು ''ತೊಟ್ಟ ಬಾಣವನ್ನು ತೊಡುವುದಿಲ್ಲ''ವೆಂದು ಹೇಳಿಬಿಟ್ಟನು. ಸರ್ಪವು ಆಕಾಶಕ್ಕೆ ನೆಗೆಯಲು ಅರ್ಜುನನು ಅದನ್ನು ಬಾಣದಿಂದ ಛೇದಿಸಿ ಕೊಂದುಹಾಕಿದನು.

ಟಿಪ್ಪಣಿ :- ತನ್ನ ಮಗನನ್ನು ಉಳಿಸಿ ಸರ್ಪಾಸ್ತ್ರವಾಗುವುದಕ್ಕೆ ಕಾರಣ-ಭೂತಳಾದ್ದರಿಂದ ಸರ್ಪಿಣಿಯನ್ನೇ ಕರ್ತ್ರಿ ಎಂದು ಭಾವಿಸಲಾಗಿದೆ. ಆದ್ದರಿಂದ ಹೆಣ್ಣುಸರ್ಪವು ಕಿರೀಟವನ್ನು ಅಪಹರಿಸಿತು ಎಂದು ಹೇಳಿದ್ದಾರೆ.

ಗೋ ಎಂದರೆ ಕಣ್ಣು. ಅದು ಕರ್ಣವಾಗಿ ಕೇಳುವುದಕ್ಕೆ ಸಾಧನವಾದ್ದರಿಂದ ಗೋಕರ್ಣ ಎಂದರೆ ಸರ್ಪ. 'ಚಕ್ಷುಃಶ್ರವ' ಎಂಬಂತೆ; ಭೂಮಿಯನ್ನು ಅದಿತಿ-ಯೆಂದು ವೇದದಲ್ಲಿ ಕರೆದಿದ್ದಾರೆ. ಗೋ ಎಂದರೆ ಭೂಮಿ. ಆದ್ದರಿಂದ 'ಗೋಶಬ್ದಾ' ಎಂದರೆ ಅದಿತಿ ಎಂದರ್ಥವಾಗಬಹುದು; ದೇವೇಂದ್ರನು ತನ್ನ ಕಿರೀಟವನ್ನು ಅರ್ಜುನನಿಗೆ ಕೊಟ್ಟಿದ್ದನು. ಅದು ಗೋಶಬ್ದಾತ್ಮಜಭೂಷಣ; ಗೋ ಎಂದರೆ ಕಿರಣಗಳು. ಆದ್ದರಿಂದ ಸೂರ್ಯನೂ 'ಗೋಶಬ್ದ'ನಾಗಬಹುದು.

'ಗೋಪುತ್ರಸಂಪ್ರೇಷಿತಾ' ಎಂಬಲ್ಲಿ 'ಗೋಮತ್‌ಪುತ್ರ' ಎಂದಿರಬೇಕು. ಆರ್ಷ-ವಾದ್ದರಿಂದ 'ಮತುಪ್' ಪ್ರತ್ಯಯಕ್ಕೆ ಲೋಪ ಬಂದಿದೆ.



ವೃಷಾದರ್ಭಿ ಎಂಬ ರಾಜನು ರಾಜ್ಯಭಾರ ಮಾಡುತ್ತಿದ್ದ ಕಾಲದಲ್ಲಿ ಅನಾವೃಷ್ಟಿಯಿಂದ ದೊಡ್ಡ ಬರಗಾಲ ಉಂಟಾಯಿತು. ಗಡ್ಡೆ ಗೆಣಸುಗಳೂ ಸಿಗದೆ ದೇಶದಲ್ಲೆಲ್ಲಾ ಹಾಹಾಕಾರ ಉಂಟಾಯಿತು. ಆಗ ಸಪ್ತರ್ಷಿಗಳು ಸಂಚಾರ ಮಾಡುತ್ತಾ ವೃಷಾದರ್ಭಿಯ ರಾಜ್ಯಕ್ಕೆ ಬಂದರು. ಕಶ್ಯಪ, ಅತ್ರಿ, ವಸಿಷ್ಠ, ಭರದ್ವಾಜ, ಗೌತಮ, ವಿಶ್ವಾಮಿತ್ರ ಮತ್ತು ಜಮದಗ್ನಿ ಮುನಿಗಳೇ ಸಪ್ತರ್ಷಿಗಳು. ವಸಿಷ್ಠರ ಪತ್ನಿ ಅರುಂಧತಿ. ಇವರೆಲ್ಲರ ಸೇವಕ ಪಶುಸಖನೆಂಬ ಶೂದ್ರ; ಅವನ ಹೆಂಡತಿಯ ಹೆಸರು ಗಂಡಾ. ಈ ಪರಿವಾರಕ್ಕೆ ಆಹಾರ ದೊರೆಯದೆ ಬಹಳ ಕಷ್ಟವಾಯಿತು. ಇದನ್ನರಿತು ರಾಜನಾದ ವೃಷಾದರ್ಭಿಯು ಇವರ ಬಳಿಗೆ ಬಂದು ''ಮಹರ್ಷಿಗಳೇ, ನೀವು ಆಹಾರವಿಲ್ಲದೆ ಸೊರಗ-ಬೇಡಿರಿ. ನನ್ನಲ್ಲಿ ಆಹಾರಪದಾರ್ಥಗಳೂ, ಐಶ್ವರ್ಯವೂ ಬೇಕಾದಷ್ಟಿವೆ. ನಿಮಗೆ ಯಾವುದು ಎಷ್ಟು ಬೇಕು ? ಹೇಳಿರಿ; ಕೊಡುತ್ತೇನೆ'' ಎಂದನು. ಅದಕ್ಕೆ ಋಷಿಗಳು ''ರಾಜನೇ, ನಾವು ಯಾವುದನ್ನೂ ದಾನವಾಗಿ ಸ್ವೀಕಸುವುದಿಲ್ಲ. ಪ್ರತಿಗ್ರಹವೆಂಬುದು ವಿಷಕ್ಕೆ ಸಮಾನವಾದದ್ದು. ಆದ್ದರಿಂದ ನೀನು ಏನನ್ನೂ ನಮಗೆ ಕೊಡಬೇಕಾಗಿಲ್ಲ'' ಎಂದು ಹೇಳಿ ಮುಂದಕ್ಕೆ ಹೊರಟುಹೋದರು. ಆಗ ರಾಜನು ಖಿನ್ನನಾಗಿ ತನ್ನ ಮಂತ್ರಿಗಳನ್ನು ಕರೆದು ಈ ಮುನಿಗಳು ದಾನವನ್ನು ಸ್ವೀಕರಿಸುವಂತೆ ಏನಾದರೂ ಉಪಾಯ ಮಾಡಿರೆಂದು ತಿಳಿಸಿದನು. ಅವರು ಅತ್ತಿಯ ಹಣ್ಣುಗಳಲ್ಲಿ ಚಿನ್ನದ ಗಟ್ಟಿಗಳನ್ನು ಉಪಾಯವಾಗಿ ತುಂಬಿಸಿ ಈ ಹಣ್ಣುಗಳನ್ನಾದರೂ ಸ್ವೀಕರಿಸಬೇಕೆಂದು ಹೇಳಿ ಋಷಿಗಳಿಗೆ ಕೊಡಲು ಹೋದರು. ಅತ್ರಿಮಹರ್ಷಿಗಳು ಹಣ್ಣನ್ನು ಮುಟ್ಟಿ ನೋಡಿ ''ಓಹೋ! ಇದು ಭಾರವಾಗಿದೆ. ಇದರಲ್ಲಿ ಚಿನ್ನವೋ ಏನೋ ಹುದುಗಿಸಲ್ಪಟ್ಟಿದೆ. ನಾವು ಇದನ್ನು ಸ್ವೀಕರಿಸಕೂಡದು'' ಎಂದರು. ಋಷಿಪರಿವಾರವು ಅತ್ತಿಯ ಹಣ್ಣುಗಳನ್ನು ತಿರಸ್ಕರಿಸಿ ಮುಂದೆ ಸಾಗಿತು.

ಈ ವೃತ್ತಾಂತವನ್ನು ಕೇಳಿ ವೃಷಾದರ್ಭಿಯು ಋಷಿಗಳ ವಿಷಯದಲ್ಲಿ ಗೌರವಬುದ್ಧಿಯನ್ನು ತಾಳಬೇಕಿತ್ತು. ಆದರೆ ಅವನ ಅಹಂಕಾರವು ತಲೆ ಎತ್ತಿತು. ಅವನಿಗೆ ಮೂಗುಮುರಿದಂತಾಗಿ ಋಷಿಗಳ ಮೇಲೆ ದುಃಸಹಕ್ರೋಧ ಉಂಟಾಯಿತು. ಈ ಬಡಮುನಿಗಳು ತನ್ನನ್ನು ಅಲಕ್ಷ್ಯ ಮಾಡಿದರಲ್ಲವೆ ? ಎಂದು ಅವರ ಮೇಲೆ ಸೇಡು ತೀರಿಸಿಕೊಳ್ಳಲು ನಿಶ್ಚಯಿಸಿ ಒಂದು ಅಭಿಚಾರ-ಯಾಗವನ್ನು ಮಾಡಿದನು. ಆ ಯಾಗದಲ್ಲಿ ಭಯಂಕರಳಾದ ಒಬ್ಬ ಕೃತ್ಯೆ ಉದ್ಭವಿಸಿದಳು. ವೃಷಾದರ್ಭಿಯು ಅವಳನ್ನು ಕುರಿತು ''ಸಪ್ತರ್ಷಿಗಳು ಪರಿವಾರ ಸಮೇತರಾಗಿ ಅರಣ್ಯದಲ್ಲಿ ಹೋಗುತ್ತಿದ್ದಾರೆ. ಅವರೆಲ್ಲರ ಹೆಸರುಗಳನ್ನು ಕೇಳಿ ಅದರಿಂದ ಅವರ ಸಾಮರ್ಥ್ಯವನ್ನು ಪರೀಕ್ಷಿಸು. ನಿನಗಿಂತ ಅವರು ದುರ್ಬಲ-ರಾಗಿದ್ದರೆ ಅವರೆಲ್ಲರನ್ನೂ ನಾಶಮಾಡು'' ಎಂದು ಆಜ್ಞಾಪಿಸಿದನು. ಕೃತ್ಯೆಯು ಅರಣ್ಯಕ್ಕೆ ಹೋಗಿ ಋಷಿಗಳ ದಾರಿಯಲ್ಲಿದ್ದ ಒಂದು ಸರೋವರದ ಬಳಿ ಕಾದುನಿಂತಳು.

ಋಷಿಗಳಿಗೆ ಒದಗಿದ ಈ ವಿಪತ್ತನ್ನು ಅರಿತು ದೇವೇಂದ್ರನು ಅವರಿಗೆ ಸಹಾಯ ಮಾಡುವುದಕ್ಕಾಗಿ ಸಂನ್ಯಾಸಿಯ ವೇಷವನ್ನು ಧರಿಸಿ ಒಂದು ನಾಯಿ-ಯನ್ನು ಹಿಡಿದುಕೊಂಡು ಋಷಿಗಳನ್ನು ಹಿಂಬಾಲಿಸಿ ಬಂದನು. ಋಷಿಗಳು ಅವನೊಬ್ಬ ''ಶುನಃಸಖ'' ಎಂದು ಭಾವಿಸಿದರು. ಅವರೆಲ್ಲರೂ ಸರೋವರದ ಬಳಿಗೆ ಬಂದು ರಾಕ್ಷಸಿಯಾದ ಕೃತ್ಯೆಯನ್ನು ಕಂಡರು. ''ನೀನು ಯಾರು ? ಸರೋವರದ ಬಳಿ ಒಂಟಿಯಾಗಿ ನಿಂತಿರಲು ಕಾರಣವೇನು ?'' ಎಂದು ಕೇಳಿದರು. ಅದಕ್ಕೆ ರಾಕ್ಷಸಿಯು ''ನಾನು ಯಾರಾದರೇನು ? ನೀವು ಕೇಳ-ಬೇಕಾಗಿಲ್ಲ. ಈ ಸರೋವರಕ್ಕೆ ನಾನು ಒಡತಿ'' ಎಂದಳು. ಅದಕ್ಕೆ ಋಷಿಗಳು ''ನಮಗೆ ಬಹಳ ಹಸಿವಾಗಿದೆ. ತಿನ್ನಲು ನಮ್ಮ ಬಳಿ ಏನೂ ಇಲ್ಲ. ನೀನು ಅನುಮತಿ ಕೊಟ್ಟರೆ ಈ ತಾವರೆಯ ದಂಟುಗಳನ್ನು ಕಿತ್ತು ತಿನ್ನುತ್ತೇವೆ'' ಎಂದರು.

ರಾಕ್ಷಸಿಯು ''ಒಳ್ಳೆಯದು; ಆದರೆ ಒಬ್ಬೊಬ್ಬರಾಗಿ ನಿಮ್ಮ ಹೆಸರುಗಳನ್ನು ಹೇಳಿ ತಾವರೆಯ ದಂಟನ್ನು ಕಿತ್ತುಕೊಳ್ಳಿರಿ'' ಎಂದಳು.

ಹೆಸರನ್ನು ಕೇಳಿದ ಕೂಡಲೇ ಋಷಿಗಳಿಗೆ ಅವಳ ರಹಸ್ಯ ಗೊತ್ತಾಗಿ ಹೋಯಿತು. ಇವಳು ಕೃತ್ಯೆ ಎಂದೂ, ತಮಗೆ ಕೇಡುಮಾಡಲು ಕಾದಿದ್ದಾಳೆಂದೂ ತಿಳಿದುಕೊಂಡರು. ರಾಕ್ಷಸಿಗೆ ಅರ್ಥವಾಗದ ಹಾಗೆ ಗೂಢವಾಗಿ ತಮ್ಮ ಹೆಸರನ್ನು ಹೇಳಿದರು. ಹೇಗೆಂದರೆ :-

ಅತ್ರಿ ಮಹರ್ಷಿಗಳು ಹೇಳುತ್ತಾರೆ-

**ಅರಾತ್ರಿರತ್ರಿಃ ಸಾರಾತ್ರಿರ್ಯಾಂ ನಾಧೀತೇ ತ್ರಿರದ್ಯ ವೈ ।**
**ಅರಾತ್ರಿರತ್ರಿರಿತ್ಯೇವ ನಾಮ ಮೇ ವಿದ್ಧಿ ಶೋಭನೇ ॥**

(ಅನುಶಾಸನ- 93-82)

ಶೋಭನೇ-ಎಲೌ ಸೌಮ್ಯಳೆ, (ಅಹಂ-ನಾನು) ಅರಾತ್-ಪಾಪದಿಂದ, ತ್ರಿಃ-ರಕ್ಷಿಸತಕ್ಕವನೂ, ಅತ್-ಮೃತ್ಯುವಿನಿಂದ, ತ್ರಿಃ-ರಕ್ಷಿಸತಕ್ಕವನೂ, ವೈ-ನಿಶ್ಚಯ -ವಾಗಿಯೂ, ಅದ್ಯ-ಈಗ, ಯಾಂ-ಯಾವುದನ್ನು, ತ್ರಿಃ-ತ್ರಿಕಾಲ ಯೋಗ-ವುಳ್ಳದ್ದನ್ನಾಗಿ, ನಾಧೀತೇ-(ವೇದವು) ಹೇಳುವುದಿಲ್ಲವೋ, ಸಾ-ಅಂತಹ, ಅರಾತ್ರಿಃ-ಬ್ರಹ್ಮಜ್ಞಾನಸ್ವರೂಪನು (ಅಸ್ಮಿ-ಆಗಿದ್ದೇನೆ. ಆದ್ದರಿಂದ) ಮೇ-ನನ್ನ ನಾಮ-ಹೆಸರನ್ನು, ಅತ್ರಿರಿತ್ಯೇವ-ಅತ್ರಿ ಎಂಬುದಾಗಿ, ವಿದ್ಧಿ-ತಿಳಿ.

ತಾತ್ಪರ್ಯ :- ನಾನು ಬ್ರಹ್ಮಜ್ಞಾನಿ. ನನಗೆ ಪಾಪದ ಲೇಪವಿಲ್ಲ. ಮರಣದ ಭಯವಿಲ್ಲ. ನಾನು ತ್ರಿಕಾಲಾತೀತನಾಗಿ ನಿತ್ಯನಾಗಿದ್ದೇನೆ. ನಾನು ಅತ್-ತ್ರಿ, ಮೃತ್ಯುವಿನಿಂದ ರಕ್ಷಿಸತಕ್ಕವನಾದ್ದರಿಂದ ಅತ್ರಿಯೆಂದು ಹೆಸರು.

ಟಿಪ್ಪಣಿ :- ಅರಾತ್+ತ್ರಿ=ಅರಾತ್ರಿ ಎಂಬಲ್ಲಿ ಅಲುಕ್ ಸಮಾಸ. ತ್ರಾಯತೇ ಇತಿ ತ್ರಿಃ ಔಣದಿಕ ಇನ್ ಪ್ರತ್ಯಯ.

ರಾಕ್ಷಸಿಗೆ ಅತ್ರಿಮುನಿಗಳ ಮಾತು ಅರ್ಥವಾಗಲಿಲ್ಲ. ತಮಃಸ್ವಭಾವದ ಅವಳಿಗೆ ವೇದಾಂತದ ದೊಡ್ಡ ಮಾತುಗಳು ಹೇಗೆ ಗೊತ್ತಾಗಬಹುದು ? ಅತ್ರಿ ಎಂಬ ಹೆಸರಿನ ನಿರುಕ್ತಿ ತಿಳಿಯದ್ದರಿಂದ ಅವಳು ಸೋಲನ್ನು ಒಪ್ಪಿಕೊಂಡಳು. ''ಮಹಾತ್ಮ, ನಿನ್ನ ವಾಕ್ಯವನ್ನು ಅರ್ಥಮಾಡಿಕೊಳ್ಳುವ ಶಕ್ತಿ ನನಗಿಲ್ಲ. ನೀನು ಸರೋವರದಲ್ಲಿಳಿದು ತಾವರೆಯ ದಂಟುಗಳನ್ನು ಕಿತ್ತುಕೊಳ್ಳಬಹುದು'' ಎಂದಳು.

ಅನಂತರ ವಸಿಷ್ಠರು ಹೇಳುತ್ತಾರೆ :-

**ವಸಿಷ್ಠೋಽಸ್ಮಿ ವರಿಷ್ಠೋಽಸ್ಮಿ ವಸೇ ವಾಸಗೃಹೇಷ್ವಪಿ ।**
**ವಸಿಷ್ಠತ್ವಾಚ್ಚ ವಾಸಾಚ್ಚ ವಸಿಷ್ಠ ಇತಿ ವಿದ್ಧಿ ಮಾಂ ॥** (ಅನು-93-84)

ವಸಿಷ್ಠಃ-ವಸುಗಳನ್ನು ಸ್ವಾಧೀನಪಡಿಸಿಕೊಂಡವನು, ಅಸ್ಮಿ-ಆಗಿದ್ದೇನೆ. ವರಿಷ್ಠಃ-ಅತ್ಯಂತ ಶ್ರೇಷ್ಠನು, ಅಸ್ಮಿ-ಆಗಿದ್ದೇನೆ. ವಾಸಗೃಹೇಷು-ವಾಸಯೋಗ್ಯ-ವಾದ ಗೃಹಸ್ಥಾಶ್ರಮದಲ್ಲಿ, ವಸೇ-ವಾಸವಾಗಿದ್ದೇನೆ. ವಸಿಷ್ಠತ್ವಾತ್-ವಸುಗಳನ್ನು ಸ್ವಾಧೀನಪಡಿಸಿಕೊಂಡಿದ್ದರಿಂದಲೂ, ವಾಸಾತ್-ಗೃಹಸ್ಥಾಶ್ರಮದಲ್ಲಿ ಇರುವು-ದರಿಂದಲೂ, ಮಾಂ-ನನ್ನನ್ನು, ವಸಿಷ್ಠ ಇತಿ-ವಸಿಷ್ಠನೆಂದು, ವಿದ್ಧಿ-ತಿಳಿ.

ಟಿಪ್ಪಣಿ :- ವಾಯು, ಅಗ್ನಿ, ಪೃಥಿವೀ, ಅಂತರಿಕ್ಷ, ದ್ಯೌ, ಸೂರ್ಯ, ಚಂದ್ರ ಮತ್ತು ನಕ್ಷತ್ರಗಳು ಇಲ್ಲಿ ವಸುಗಳೆಂದು ತಿಳಿಯಬೇಕು. ಇವುಗಳನ್ನು ಸ್ವಾಧೀನ-ಪಡಿಸಿಕೊಂಡವನೆಂದರೆ ಅಣಿಮಾದ್ಯೈಶ್ವರ್ಯಗಳನ್ನು ಪಡೆದ ಮಹಾಯೋಗಿ-ಯೆಂದರ್ಥ. ''ಅತಿಶಯೇನ ವಸುಮಾನ್ ವಸಿಷ್ಠಃ''. 'ವಸುಮತ್' ಶಬ್ದದ ಮೇಲೆ 'ಇಷ್ಠನ್' ಪ್ರತ್ಯಯವು ಬಂದು 'ಮತುಪ್' ಪ್ರತ್ಯಯಕ್ಕೆ ಲೋಪ ಬಂದಿದೆ. 'ಅತಿಶಯೇನ ವಸೇ ಇತಿ ವಸಿಷ್ಠಃ' ಎಂಬುದು ಇನ್ನೊಂದು ನಿರುಕ್ತಿ. 'ವಸ್ತೃ' ಶಬ್ದದ ಮೇಲೆ 'ಇಷ್ಠನ್' ಪ್ರತ್ಯಯವು ಬಂದು 'ತೃನ್' ಪ್ರತ್ಯಯಕ್ಕೆ ಲೋಪ ಬಂದಿದೆ. ಗೃಹಸ್ಥರಲ್ಲಿ ಶ್ರೇಷ್ಠನೆಂದು ಅಭಿಪ್ರಾಯ.

ಕೃತ್ಯೆಗೆ ವಸಿಷ್ಠರ ಮಾತು ಅರ್ಥವಾಗಲಿಲ್ಲ. 'ಮಹರ್ಷಿ, ನಿನ್ನ ಹೆಸರಿನ ನಿರುಕ್ತಿಯು ನನಗೆ ತಿಳಿಯಲಿಲ್ಲ. ನೀನು ಸರೋವರದಲ್ಲಿಳಿದು ತಾವರೆಯ ದಂಟುಗಳನ್ನು ಕಿತ್ತುಕೊಳ್ಳಬಹುದು' ಎಂದಳು.



ಆಮೇಲೆ ಕಶ್ಯಪರು ಹೇಳುತ್ತಾರೆ :-

**ಕುಲಂ ಕುಲಂ ಚ ಕುವಮಃ ಕುವಮಃ ಕಶ್ಯಪೋ ದ್ವಿಜಃ ।**
**ಕಾಶ್ಯಃ ಕಾಶನಿಕಾಶತ್ವಾದೇತನ್ಮೇ ನಾಮ ಧಾರಯ ॥**

(ಅಹಂ-ನಾನು) ಕುಲಂಕುಲಂ ಚ-ಪ್ರತಿಯೊಂದು ಶರೀರದಲ್ಲಿಯೂ, ಕುವಮಃ ಕುವಮಃ-ತೇಜಸ್ವಿಯಾದ ಸೂರ್ಯನಾಗಿದ್ದೇನೆ. ಕಶ್ಯಪಃ-ಶರೀರನ್ನು ಅಂತರ್ಯಾಮಿಯಾಗಿ ರಕ್ಷಿಸತಕ್ಕವನೂ, ದ್ವಿಜಃ-ವಿಪ್ರನೂ ಆಗಿದ್ದೇನೆ. ಕಾಶನಿ-ಕಾಶತ್ವಾತ್-ಕಾಶಪುಷ್ಪದಂತೆ ಬಿಳಿಯ ತಲೆಯವನಾಗಿ, ಕಾಶ್ಯಃ-ತೇಜಸ್ವಿಯಾಗಿದ್ದೇನೆ, ಏತತ್-ಇದು, ಮೇನಾಮ-ನನ್ನ ಹೆಸರೆಂದು, ಧಾರಯ-ತಿಳಿದುಕೋ.

ತಾತ್ಪರ್ಯ :- ಸರ್ವಶರೀರಗಳಲ್ಲಿರುವ ಆತ್ಮಚೈತನ್ಯವೂ ನಾನೇ. ಇದು ಅಧ್ಯಾತ್ಮ ಸ್ವರೂಪ. ದ್ವಾದಶಾದಿತ್ಯರೂ ನನ್ನ ಮಕ್ಕಳಾದ್ದರಿಂದ ನಾನು ಆದಿತ್ಯರೂಪನೂ ಹೌದು. ಇದು ಅಧಿದೈವ ಸ್ವರೂಪ. ಕೇಶಗಳೆಲ್ಲಾ ನರೆತು ಕಾಶಪುಷ್ಪ-ಗಳಂತಿರುವುದರಿಂದ ನನ್ನ ತೇಜಸ್ಸಿನ ಬಾಹ್ಯರೂಪವನ್ನೂ ನೋಡಬಹುದು. ಇದು ಅಧಿಭೂತ ಸ್ವರೂಪ.

ಟಿಪ್ಪಣಿ :- ಕಶ್ಯ ಎಂದರೆ ಶರೀರ. 'ಕಶ್ಯಾನಿ ಪಾತಿ' ಅಥವಾ 'ಕಶ್ಯೈಃ ಭುಂಕ್ತೇ' ಇತಿ ಕಶ್ಯಪಃ-ಶರೀರಗಳನ್ನು ಅಂತರ್ಯಾಮಿ ರೂಪದಿಂದ ರಕ್ಷಿಸತಕ್ಕವನು ಅಥವಾ ಶರೀರಗಳ ಮೂಲಕ ಸುಖದುಃಖಗಳನ್ನು ಅನುಭವಿಸುವವನಾದ್ದರಿಂದ ಕಶ್ಯಪ ಕು ಎಂದರೆ ಭೂಮಿ. ಕೌ ವಮತೀತಿ ಕುವಮಃ-ಭೂಮಿಯಲ್ಲಿ ಮಳೆ ಸುರಿಸುವವನು, ಸೂರ್ಯನೆಂದರ್ಥ. ಕುವಮ ಶಬ್ದದ ಸ್ಥಾನದಲ್ಲಿ ಕುಪಪೀಃ ಎಂದು ಪಾಠ ಉಂಟು. ಕುಂ ಪಾತೀತಿ-ಕುಪಪೀಃ ಭೂಮಿಯನ್ನು ರಕ್ಷಿಸುವವನು. ಆಗಲೂ ಸೂರ್ಯನೆಂದೇ ಅರ್ಥ. ಕುಲ, ಕುವಮ ಶಬ್ದಗಳಿಗೆ ವೀಪ್ಸಾರ್ಥದಲ್ಲಿ ದ್ವಿತ್ವ ಬಂದಿದೆ.

ರಾಕ್ಷಸಿಗೆ ಏನೂ ಗೊತ್ತಾಗಲಿಲ್ಲ. ''ಮಹಾತ್ಮ, ನಿನ್ನ ಮಾತನ್ನು ಅರ್ಥ-ಮಾಡಿಕೊಳ್ಳುವ ಶಕ್ತಿ ನನಗಿಲ್ಲ. ನೀನು ತಾವರೆಯ ದಂಟುಗಳನ್ನು ಕಿತ್ತುಕೊಳ್ಳ-ಬಹುದು'' ಎಂದಳು.

ಅನಂತರ ಭರದ್ವಾಜ ಮುನಿಗಳು ಹೇಳುತ್ತಾರೆ :-

**ಭರೇಽಸುತಾನ್ ಭರೇಽಶಿಷ್ಯಾನ್ ಭರೇ ದೇವಾನ್ ಭರೇ ದ್ವಿಜಾನ್ ।**
**ಭರೇ ಭಾರ್ಯಾಂ ಭರೇ ದ್ವಾಜಂ ಭರದ್ವಾಜೋಽಸ್ಮಿ ಶೋಭನೇ ॥**

ಶೋಭನೇ-ಸೌಮ್ಯಳೇ, (ಅಹಂ-ನಾನು) ಅಸುತಾನ್-ನನ್ನ ಮಕ್ಕಳಲ್ಲದ ದೀನಜನರನ್ನೂ, ಭರೇ-ಪಾಲಿಸುತ್ತೇನೆ. ಅಶಿಷ್ಯಾನ್-ಶಾಸನಕ್ಕೆ ಒಳಗಾಗದ ರಾಕ್ಷಸರನ್ನೂ, ಶತ್ರುಗಳನ್ನೂ, ಭರೇ-ವಶಪಡಿಸಿಕೊಂಡು ಕಾಪಾಡುತ್ತೇನೆ. ದೇವಾನ್-ದೇವತೆಗಳನ್ನೂ, ಭರೇ-ಹವಿಸ್ಸುಗಳಿಂದ ಪಾಲಿಸುತ್ತೇನೆ. ದ್ವಿಜಾನ್-ಬ್ರಾಹ್ಮಣರನ್ನೂ, ಭರೇ-ತಪೋಬಲದಿಂದ ರಕ್ಷಿಸುತ್ತೇನೆ. ಭಾರ್ಯಾಂ-ಹೆಂಡತಿಯನ್ನೂ (ಮಕ್ಕಳನ್ನೂ ಸಹ), ಭರೇ-ಪೋಷಿಸುತ್ತೇನೆ. ದ್ವಾಜಂ-ಸಂಕರಜಾತಿಯ ಶೂದ್ರನನ್ನೂ ಕೂಡ, ಭರೇ-ಸಂರಕ್ಷಿಸುತ್ತೇನೆ. (ಆದ್ದರಿಂದ) ಭರದ್ವಾಜಃ-ಭರದ್ವಾಜನು, ಅಸ್ಮಿ-ಆಗಿದ್ದೇನೆ.

ತಾತ್ಪರ್ಯ :- ನಾನು ದೇವದಾನವರನ್ನೂ ಪಾಲಿಸಲು ಸಮರ್ಥನಾಗಿದ್ದೇನೆ. ಮಮತ್ತ್ವ ಜಾತಿಪ್ರೇಮಗಳು ನನ್ನಲ್ಲಿಲ್ಲ. ನನ್ನ ಹೆಂಡತಿ ಮಕ್ಕಳನ್ನು ಪೋಷಿಸಿದಂತೆ ಇತರರನ್ನೂ, ಬ್ರಾಹ್ಮಣರಂತೆ ಶೂದ್ರರನ್ನೂ ಸಂರಕ್ಷಿಸುತ್ತೇನೆ. ದ್ವಾಜರನ್ನು ಎಂದರೆ ಶೂದ್ರರನ್ನು ಪೋಷಣೆ ಮಾಡುವುದರಿಂದ ನನಗೆ ಭರದ್ವಾಜನೆಂದು ಹೆಸರು.

ಕೃತ್ಯೆಯ ಬುದ್ಧಿಗೆ ಏನೂ ಹೊಳೆಯಲಿಲ್ಲ. ''ಪುಣ್ಯಾತ್ಮ, ನೀನು ತಾವರೆಯ ದಂಟುಗಳನ್ನು ಕಿತ್ತುಕೊಳ್ಳಬಹುದು'' ಎಂದಳು.

ಆಮೇಲೆ ಗೌತಮರು ಹೇಳುತ್ತಾರೆ :-

**ಗೋದಮೋ ದಮತೋಽಧೂಮೋಽದಮಸ್ತೇ ಸಮದರ್ಶನಾತ್ ।**
**ವಿದ್ಧಿ ಮಾಂ ಗೌತಮಂ ಕೃತ್ಯೇ ಯಾತುಧಾನಿ ನಿಬೋಧ ಮಾಂ ॥**

ಕೃತ್ಯೇ-ಎಲೌ ರಾಕ್ಷಸಿ, (ಅಹಂ-ನಾನು) ದಮತಃ-ಇಂದ್ರಿಯ ಜಯದಿಂದ, ಗೋದಮಃ-ಭೂಮಿಯನ್ನೂ, ಸ್ವರ್ಗವನ್ನೂ ವಶಪಡಿಸಿಕೊಳ್ಳಲು ಶಕ್ತನೂ, ಅಧೂಮಃ-ಹೊಗೆಯಿಲ್ಲದ ಅಗ್ನಿಗೆ ಸಮಾನನೂ, ತೇ-ನಿನ್ನಲ್ಲಿ, ಸಮದರ್ಶನಾತ್-ಬ್ರಹ್ಮವಸ್ತುವನ್ನು ನೋಡುತ್ತಿರುವುದರಿಂದ, ಅದಮಃ-ವಶಪಡಿಸಿಕೊಳ್ಳಲು ಅಶಕ್ಯನೂ, ಅಸ್ಮಿ-ಆಗಿದ್ದೇನೆ. (ಆದ್ದರಿಂದ) ಮಾಂ-ನನ್ನನ್ನು, ಗೌತಮಂ-ಗೌತಮನೆಂದು, ವಿದ್ಧಿ-ತಿಳಿ; ಯಾತುಧಾನಿ-ರಾಕ್ಷಸಿಯೇ, ಮಾಂ-ನನ್ನ ಸ್ವರೂಪವನ್ನು, ನಿಬೋಧ-ತಿಳಿದುಕೊ.

ತಾತ್ಪರ್ಯ :- ನಾನು ಜಿತೇಂದ್ರಿಯನಾಗಿ ತಪಃಪ್ರಭಾವದಿಂದ ಭೂಮಿ ಸ್ವರ್ಗಗಳನ್ನು ಬೇಕಾದರೂ ವಶಪಡಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆದಿದ್ದೇನೆ. ನಿರ್ಧೂಮವಾದ ಅಗ್ನಿಯಂತೆ ತೇಜಸ್ವಿಯಾಗಿದ್ದೇನೆ. ನಾನು ಬ್ರಹ್ಮಜ್ಞಾನಿ, ನೀನೂ ಕೂಡ ಬ್ರಹ್ಮಸ್ವರೂಪಳೇ ಎಂದು ನನಗೆ ನಿಶ್ಚಯ ಜ್ಞಾನವಿದೆ. 'ತಸ್ಯ ಹ ದೇವಾಶ್ಚ ನಾಭೂತ್ಯಾ ಈಶತೇ' ಎಂಬ ವೇದವಾಕ್ಯದಂತೆ ನನ್ನನ್ನು ಗೆಲ್ಲಲು ಯಾರಿಗೂ ಸಾಧ್ಯವಿಲ್ಲ. ನಿನ್ನಂತಹ ಬಡ ರಾಕ್ಷಸಿಯ ಪಾಡೇನು ? ನಾನು ಗೋದಮನಾದ್ದರಿಂದಲೂ ಗೌತಮ; ಗೋತಮನಾದ್ದರಿಂದಲೂ ಗೌತಮ!

ಟಿಪ್ಪಣಿ :- ಗೋಶಬ್ದಕ್ಕೆ ಭೂಮಿ, ಸ್ವರ್ಗ ಎಂಬ ಎರಡು ಅರ್ಥಗಳೂ ಉಂಟು. ಸಮ ಎಂದರೆ ಪರಬ್ರಹ್ಮವಸ್ತು. 'ನಿರ್ದೋಷಂ ಹಿ ಸಮಂ ಬ್ರಹ್ಮ' ಎಂದು ಭಗವದ್ಗೀತೆಯಲ್ಲಿ ಹೇಳಿದೆ. 'ಪಂಡಿತಾಃ ಸಮದರ್ಶಿನಃ' ಎಂಬ ಗೀತಾವಾಕ್ಯಕ್ಕೆ ಭಾಷ್ಯವನ್ನು ಬರೆಯುವಾಗ ಶ್ರೀ ಶಂಕರಾಚಾರ್ಯರು ಸಮದರ್ಶಿ-ಗಳೆಂದರೆ ಬ್ರಹ್ಮದರ್ಶಿಗಳೆಂದು ಹೇಳಿದ್ದಾರೆ.

ಗೋದಮನಾದ್ದರಿಂದ ಗೌತಮ. ದಕಾರಕ್ಕೆ ತಕಾರವು ನಿಪಾತವಾಗಿ ಬಂದಿದೆ. ಸ್ವಾರ್ಥದಲ್ಲಿ ಅಣ್ ಪ್ರತ್ಯಯ. 'ಗೋತಮನಾದ್ದರಿಂದ ಗೌತಮ' ಎಂಬುದರ ಅಭಿಪ್ರಾಯ ಹೀಗೆ :- ತಾಯಿಯ ಗರ್ಭದಿಂದ ಹುಟ್ಟುವಾಗಲೇ ಗೌತಮರು ಮಹಾ ತೇಜಸ್ವಿಗಳಾಗಿ ಇದ್ದುದರಿಂದ ಕತ್ತಲೆಯು ನಾಶವಾಗಿ ಸುತ್ತಲೂ ಬೆಳಕು ಚೆಲ್ಲಿತು. ಗೋ-ಕಿರಣಗಳಿಂದ, ತಮಃ-ಕತ್ತಲೆಯು ನಾಶ-ವಾದ್ದರಿಂದ ಗೋತಮ ಎಂದು ಹೆಸರು ಬಂದಿತು. ಗೋತಮನೇ ಗೌತಮ. ಸ್ವಾರ್ಥೇ ಅಣ್ ಪ್ರತ್ಯಯ.

ಗೋದಮನು ಗೌತಮನಾದದ್ದು ಹೇಗೆ ಎಂಬುದು ರಾಕ್ಷಸಿಗೆ ಸಮಸ್ಯೆ-ಯಾಯಿತು. ಅವಳಿಗೆ ಏನೂ ತಿಳಿಯಲಿಲ್ಲ. ತಲೆಯು ಚಿಟ್ಟುಹಿಡಿದಂತಾಗಿ ''ಮಹರ್ಷಿ, ನಿನಗೆ ಬೇಕಾದಷ್ಟು ತಾವರೆಯ ದಂಟುಗಳನ್ನು ಕಿತ್ತುಕೊಳ್ಳ-ಬಹುದು'' ಎಂದಳು.

ಅನಂತರ ವಿಶ್ವಾಮಿತ್ರ ಋಷಿಗಳು ಹೇಳುತ್ತಾರೆ-

**ವಿಶ್ವೇದೇವಾಶ್ಚ ಮೇ ಮಿತ್ರಂ ಮಿತ್ರಮಸ್ಮಿ ಗವಾಂ ತಥಾ ।**
**ವಿಶ್ವಾಮಿತ್ರಮಿತಿ ಖ್ಯಾತಂ ಯಾತುಧಾನಿ ನಿಬೋಧ ಮಾಂ ॥**

ವಿಶ್ವೇ-(ಬ್ರಹ್ಮಾಂಡದಲ್ಲಿರುವ) ಎಲ್ಲಾ, ದೇವಾಃ-ದೇವತೆಗಳೂ ಮತ್ತು ವಿಶ್ವೇ-(ಪಿಂಡಾಂಡದಲ್ಲಿರುವ) ಎಲ್ಲಾ, ದೇವಾಃ-ಇಂದ್ರಿಯಗಳೂ, ಮೇ-ನನಗೆ ಮಿತ್ರ-ಮಿತ್ರರು. ತಥಾ-ಹಾಗೆಯೇ, ಗವಾಂ-ಹಸುಗಳಿಗೆ ಮತ್ತು ಇಂದ್ರಿಯಗಳಿಗೆ ಮಿತ್ರಂ-ಮಿತ್ರನು, ಅಸ್ಮಿ-ಆಗಿದ್ದೇನೆ. ಇತಿ-ಈ ರೀತಿಯಾಗಿ, ಖ್ಯಾತಂ-ಪ್ರಸಿದ್ಧನಾದ, ಮಾಂ-ನನ್ನನ್ನು, ವಿಶ್ವಾಮಿತ್ರಂ-ವಿಶ್ವಾಮಿತ್ರನೆಂದು ಯಾತುಧಾನಿ-ಎಲೌ ರಾಕ್ಷಸಿಯೇ, ವಿದ್ಧಿ-ತಿಳಿ.

ತಾತ್ಪರ್ಯ :- ನಾನು ವಿಶ್ವಕಲ್ಯಾಣವನ್ನು ಬಯಸುವವನಾದ್ದರಿಂದ ದೇವತೆ-ಗಳೆಲ್ಲರೂ ನನಗೆ ಮಿತ್ರರು, ಅಜ್ಞಾನಿಗೆ ಇಂದ್ರಿಯಗಳು ಶತ್ರುಗಳಾಗುತ್ತವೆ. ಏಕೆಂದರೆ, ಅವು ಅಜ್ಞಾನಿಯನ್ನು ಅಡ್ಡದಾರಿಗೆ ಎಳೆಯುತ್ತವೆ. ಜಿತೇಂದ್ರಿಯ-ನಾದ ನನಗೆ ಅವು ಏನನ್ನೂ ಮಾಡಲಾರವು. ಸನ್ಮಾರ್ಗದಲ್ಲಿ ಹೋಗಲು ಸಹಾಯ ಮಾಡುವುದರಿಂದ ಅವು ನನಗೆ ಮಿತ್ರರೇ ಸರಿ. ವಿಶ್ವವು ನನಗೆ ಮಿತ್ರ; ನಾನು ವಿಶ್ವಕ್ಕೆ ಮಿತ್ರ. ಆದ್ದರಿಂದ ನನಗೆ ವಿಶ್ವಾಮಿತ್ರನೆಂದು ಹೆಸರು.

ಯಾತುಧಾನಿಗೆ ಈ ಅಭಿಪ್ರಾಯ ಗೊತ್ತಾಗಲಿಲ್ಲ. ವಿಶ್ವೇದೇವರೆಂದರೆ ಶ್ರಾದ್ಧದಲ್ಲಿ ಬರುವ ದೇವತೆಗಳೆ ? ಹಸುಗಳಿಗೆ ಮಿತ್ರನೆಂದರೆ ದನಕಾಯುವವ-ನೆಂದು ಅರ್ಥವೆ ? ಇನ್ನೊಂದು ವಿಚಿತ್ರವೇನೆಂದರೆ, ವಿಶ್ವಕ್ಕೆ ಮಿತ್ರನಾದರೆ ವಿಶ್ವಮಿತ್ರನಾಗಬೇಕು. ವಿಶ್ವಾಮಿತ್ರನಾದುದು ಹೇಗೆ ? ವಿಶ್ವಕ್ಕೆ 'ಅಮಿತ್ರ' ಶತ್ರು ಎಂದು ಅರ್ಥವಾಗುವುದಲ್ಲ! ಏನೂ ತೋಚದೆ ಅವಳು ಹೇಳಿದಳು. "ಪುಣ್ಯಾತ್ಮ, ನಿನ್ನ ಮಾತು ನನಗೆ ಅರ್ಥವಾಗುವುದಿಲ್ಲ. ನೀನು ಸರೋವರದಲ್ಲಿ ಇಳಿಯಬಹುದು."

ಟಿಪ್ಪಣಿ :- 'ವಿಶ್ವಸ್ಯ ಹ ವೈ ಮಿತ್ರಂ ವಿಶ್ವಾಮಿತ್ರ ಆಸ' ಎಂದು ವೇದವು ಹೇಳುತ್ತದೆ. 'ಮಿತ್ರೇ ಚರ್ಷೌ' ಎಂಬ ವ್ಯಾಕರಣಸೂತ್ರದಿಂದ ವಿಶ್ವ ಶಬ್ದಕ್ಕೆ ದೀರ್ಘಬರುತ್ತದೆ

ಆಮೇಲೆ ಜಮದಗ್ನಿ ಮುನಿಗಳು ಹೇಳುತ್ತಾರೆ-

**ಜಾಜಮದ್ಯಜಜಾನೇಽಹಂ ಜಿಜಾಹೀಹ ಜಿಜಾಯಿಷಿ ।**
**ಜಮದಗ್ನಿರಿತಿಖ್ಯಾತಸ್ತತೋ ಮಾಂ ವಿದ್ಧಿ ಶೋಭನೇ ॥**

ಜಾಜಮತ್- ದೇವತೆಗಳು, ಯಜ- ಅಗ್ನಿ ಇವುಗಳ, ಜಾನೇ- ಆವಿರ್ಭಾವ ಸ್ಥಾನದಲ್ಲಿ, ಇಹ- ಈ ಲೋಕದಲ್ಲಿ, ಅಹಂ- ನಾನು, ಜಜಾಯಿಷಿ- ಹುಟ್ಟಿದೆನು. (ಇದನ್ನು, ಜಜಾಹಿ- ತಿಳಿದುಕೋ. ತತಃ- ಆದ್ದರಿಂದ, ಜಮದಗ್ನಿರಿತಿ- ಜಮದಗ್ನಿ- ಯೆಂದು, ಖ್ಯಾತಃ- ಪ್ರಸಿದ್ಧನಾಗಿದ್ದೇನೆ. ಶೋಭನೇ- ಸೌಮ್ಯಳೆ, ಮಾಂ- ನನ್ನನ್ನು, ವಿದ್ಧಿ- ಅರಿತುಕೊ.

ತಾತ್ಪರ್ಯ :- ನಾನು ಸಾಧಾರಣ ಮನುಷ್ಯನಲ್ಲ. ದೇವತೆಗಳಂತೆ ವಿಶೇಷ ಪ್ರಭಾವಶಾಲಿಯಾದವನು. ನನ್ನನ್ನು ಗೆಲ್ಲಲು ನಿನಗೆ ಸಾಧ್ಯವಿಲ್ಲ.

ಟಿಪ್ಪಣಿ :- 'ಜಾಜಮದ್ಯಜ' ಶಬ್ದದಲ್ಲಿ 'ಜಾ' ಎಂಬ ಪ್ರಥಮಾಕ್ಷರಕ್ಕೆ ಲೋಪವೂ, ಯಜ ಶಬ್ದಕ್ಕೆ 'ಅಗ್ನಿ' ಶಬ್ದಾದೇಶವೂ ಬಂದು ಜಮದಗ್ನಿ ಶಬ್ದವಾಗಿದೆ. 'ಜ್ಞಾ' ಧಾತುವಿನ ಯಙ್‌ಲುಗಂತದಲ್ಲಿ 'ಜಜಾಹಿ' ಎಂದು ರೂಪವಾಗುತ್ತದೆ. 'ಜನ್' ಧಾತುವಿನ ಯಙಂತದ ಮೇಲೆ 'ಸನ್' ಪ್ರತ್ಯಯ ಬಂದು 'ಜಜಾಯಿಷಿ' ಎಂಬ ರೂಪವಾಗಿದೆ

ಕೆಲವು ಪುಸ್ತಕಗಳಲ್ಲಿ ಪ್ರಥಮಾರ್ಧದ ಪಾಠಾಂತರವು ಹೀಗಿದೆ-

**ಜಾಜಮದ್ಯಜಜಾ ನಾಮ ಮೃಜಾ ಮಾಹ ಜಜಾಯಿಷಿ ।**
**(ಜಮದಗ್ನಿರಿತಿಖ್ಯಾತಃ...... ...... ॥)**

(ಸಂಪತ್ತುಗಳು) ಜಾಜಮತ್- ದೇವತೆಗಳಿಂದಲೂ, ಯಜ- ಅಗ್ನಿ- ಯಿಂದಲೂ, ಜಾಃ- ಹುಟ್ಟಿರತಕ್ಕವು, ನಾಮ- ನಿಶ್ಚಯವಾಗಿ (ಆದ್ದರಿಂದ ಇವು) ಮೃಜಾ- ಸುಳ್ಳುಪದಾರ್ಥಗಳು; ಎಂದು ಮಾ- ನನಗೆ, ಆಹ- (ವೇದವು) ಬೋಧಿಸಿತು. ನಾನು ಈ ಸಂಪತ್ತುಗಳನ್ನು ಜಜಾಯಿಷಿ- ಗೆದ್ದಿರುವೆನು. ಆದ್ದರಿಂದ ನನಗೆ ಜಮದಗ್ನಿಯೆಂದು ಹೆಸರಾಯಿತು.

ಲೋಕವನ್ನೇ ಗೆದ್ದಿರುವ ನನ್ನನ್ನು ಗೆಲ್ಲಲು ನಿನಗೆ ಸಾಧ್ಯವಿಲ್ಲ ಎಂದು ಅಭಿಪ್ರಾಯ.

ಶಬ್ದಗಳ ಈ ಎಳೆದಾಟದಿಂದ ಯಾತುಧಾನಿಗೆ ದಿಗ್ಭ್ರಮೆಯಾಯಿತು. ಅವಳಿಗೆ ಏನೂ ತಿಳಿಯಲಿಲ್ಲ. ''ಮಹರ್ಷಿ, ನಿನ್ನ ನಾಮಧೇಯದ ವ್ಯುತ್ಪತ್ತಿ

ನನಗೆ ತಿಳಿಯದು; ನಾನು ಸೋತೆ. ಕೊಳದಲ್ಲಿಳಿದು ತಾವರೆಯ ದಂಟುಗಳನ್ನು ಕಿತ್ತುಕೊಳ್ಳಬಹುದು'' ಎಂದಳು.

ಬಳಿಕ ಅರುಂಧತೀದೇವಿ ಹೇಳುತ್ತಾಳೆ-

**ಧರಾನ್ ಧರಿತ್ರೀಂ ವಸುಧಾಂ ಭರ್ತುಸ್ತಿಷ್ಠಾಮ್ಯನಂತರಂ ।**
**ಮನೋಽನುರುಂಧತೀ ಭರ್ತುರಿತಿ ಮಾಂ ವಿದ್ಧ್ಯರುಂಧತೀಂ ॥**

ಭರ್ತುಃ :- ನನ್ನ ಪತಿಯಾದ ವಸಿಷ್ಠ ಮುನಿಯ, ಮನಃ-ಮನಸ್ಸನ್ನು, ಅನುರುಂಧತೀ- ಅನುಸರಿಸುತ್ತಾ, ಭರ್ತುಃ-ಪತಿಯ, ಅನಂತರಂ-ಬಳಿಯಲ್ಲಿ, ಧರಾನ್-ಪರ್ವತಗಳನ್ನೂ, ಧರಿತ್ರೀಂ-ಭೂಮಿಯನ್ನೂ, ವಸುಧಾಂ-ಸ್ವರ್ಗ-ಲೋಕವನ್ನೂ, ತಿಷ್ಠಾಮಿ-ಆವರಿಸಿಕೊಂಡು ನಿಂತಿದ್ದೇನೆ. ಆದ್ದರಿಂದ ಮಾಂ-ನನ್ನನ್ನು, ಆರುಂಧತೀಂ-ಅರುಂಧತಿಯನ್ನಾಗಿ, ವಿದ್ಧಿ-ತಿಳಿ.

ತಾತ್ಪರ್ಯ :-ನಾನು ಪಾತಿವ್ರತ್ಯ ಮಹಿಮೆಯಿಂದಲೂ, ಬ್ರಹ್ಮಜ್ಞಾನ ಬಲದಿಂದಲೂ ವಿಶ್ವವನ್ನೇ ವ್ಯಾಪಿಸಿ ನಿಂತಿರುವೆನು. 'ಅರುಷಃ ದಧಾತೀತಿ ಅರುಂಧತೀ' ಕಠಿಣಶಿಲೆಗಳನ್ನೂ, ಪರ್ವತಗಳನ್ನೂ ವ್ಯಾಪಿಸಿ ಧರಿಸಿದವ-ಳಾದ್ದರಿಂದ ಅರುಂಧತೀ ಅಥವಾ 'ಭರ್ತುರ್ಮನಃ ಅನುರುಣದ್ಧೀತಿ ಅರುಂಧತೀ' ಗಂಡನ ಮನಸ್ಸನ್ನು ಅನುಸರಿಸಿ ನಡೆಯತಕ್ಕವಳು ಅರುಂಧತೀ. ಕೃತ್ಯೆಗೆ ಉಂಟಾದ ಸಮಸ್ಯೆಯೇನೆಂದರೆ, ಧರಾ, ಧರಿತ್ರೀ, ವಸುಧಾ ಎಂಬ ಮೂರು ಶಬ್ದಗಳಿಗೂ ಭೂಮಿಯೆಂದು ಅರ್ಥ. ಹೀಗಿರುವಲ್ಲಿ ಈ ಪರ್ಯಾಯ ಪದಗಳನ್ನು ಉಪಯೋಗಿಸಿದುದರ ಅಭಿಪ್ರಾಯವೇನು? ಅನುರುಣದ್ಧೀತಿ 'ಅನುರುಂಧತೀ' ಆಗಬೇಕಲ್ಲ. 'ನು' ಶಬ್ಧವೇನಾಯಿತು? ಇತ್ಯಾದಿ.

ಟಿಪ್ಪಣಿ :- 'ವಸೂನ್ ಧತ್ತೇ' ದೇವತೆಗಳನ್ನು ಧರಿಸುತ್ತದೆ ಎಂಬ ವ್ಯುತ್ಪತ್ತಿಯಿಂದ ವಸುಧೆಯೆಂದರೆ ಸ್ವರ್ಗವೆಂದು ಅರ್ಥ. 'ಅನುರುಣದ್ಧಿ' ಎಂಬ ಪಕ್ಷದಲ್ಲಿ ನು ಶಬ್ದಕ್ಕೆ ಲೋಪಬರುತ್ತದೆ. ಅರುಸ್ ಶಬ್ದವಾದಲ್ಲಿ ಸಕಾರ-ಲೋಪಬಂದು ಮುಮ್ ಎಂಬ ಆಗಮ ಬರುತ್ತದೆ.

ಈ ವಿಚಾರವೆಲ್ಲಾ ಕೃತ್ಯೆಯ ತಲೆಗೆ ಹತ್ತಲಿಲ್ಲ. 'ಮಹಾತ್ಮಳೆ, ನಿನ್ನ ಮಾತು ನನಗೆ ಅರ್ಥವಾಗಲಿಲ್ಲ. ಸರೋವರದಲ್ಲಿಳಿದು ತಾವರೆಯ ದಂಟುಗಳನ್ನು ಕಿತ್ತುಕೊಳ್ಳಬಹುದು' ಎಂದಳು.

ಅನಂತರ ದಾಸಿಯಾದ 'ಗಂಡಾ' ಹೇಳುತ್ತಾಳೆ-

**ವಕ್ತ್ರೈಕದೇಶೇ ಗಂಡೇತಿ ಧಾತುಮೇತಂ ಪ್ರಚಕ್ಷತೇ ।**
**ತೇನೋನ್ನತೇನ ಗಂಡೇತಿ ವಿದ್ಧಿ ಮಾಽನಲಸಂಭವೇ ।**

ಅನಲಸಂಭವೇ-ಅಗ್ನಿಯಲ್ಲಿ ಹುಟ್ಟಿದ ರಾಕ್ಷಸಿಯೆ, ವಕ್ತ್ರೈಕದೇಶೇ-ಮುಖದ ಒಂದು ಭಾಗವೆಂಬ ಅರ್ಥದಲ್ಲಿ, ಗಂಡೇತಿ-ಗಂಡ ಎಂಬ, ಏತಂ-ಈ, ಧಾತುಂ-ಧಾತುವನ್ನು, ಪ್ರಚಕ್ಷತೇ-ಹೇಳುತ್ತಾರೆ. ಉನ್ನತೇನ-ಉಬ್ಬಿಕೊಂಡಿರುವ, ತೇನ-ಅದರಿಂದ, ಗಂಡೇತಿ-ಗಂಡಾ ಎಂಬುದಾಗಿ, ಮಾ-ನನ್ನನ್ನು ವಿದ್ಧಿ-ತಿಳಿ.

ತಾತ್ಪರ್ಯ :- 'ಗಡಿ-ವದನೈಕದೇಶೇ' ಎಂಬ ಧಾತುವಿದೆ. ಆದರಿಂದ 'ಗಂಡ' ಎಂಬ ಶಬ್ದ ಹುಟ್ಟಿದೆ. ಗಂಡವೆಂದರೆ 'ಕೆನ್ನೆ; ಕಪಾಳ' ಎಂದರ್ಥ. ಅದು ಉಬ್ಬಿಕೊಂಡಿರುವುದರಿಂದ ನನಗೆ ಗಂಡಾ ಎಂದು ಹೆಸರು ಬಂದಿದೆ.

ರಾಕ್ಷಸಿಗೆ ಇಲ್ಲಿ ತೊಡಕು ಬಂದದ್ದು ಹೀಗೆ :- 'ಉಬ್ಬಿಕೊಂಡಿರುವ ಅದು' ಎಂದರೆ ಧಾತುವೋ? ಗಂಡಸ್ಥಲವೋ? 'ಗಂಡೇತಿ ಮಾ ವಿದ್ಧಿ' 'ಗಂಡಾ ಎಂದು ತಿಳಿಯಬೇಡ' ಎಂಬ ಅರ್ಥ ತೋರುವುದಲ್ಲಾ! ಕೆನ್ನೆ ಉಬ್ಬಿದ್ದರೆ ಗಂಡಾ ಎಂಬ ಹೆಸರು ಜನರ ವ್ಯವಹಾರದಿಂದ ಬಂದಿರಬೇಕು. ಮಾತಾ-ಪಿತೃಗಳು ಇಟ್ಟ ಹೆಸರು ಯಾವುದು ? ಆದ್ದರಿಂದ ಅವಳಿಗೆ ಏನೂ ತೋರದೆ 'ನಿನ್ನ ಮಾತು ತಿಳಿಯಲಿಲ್ಲ. ಕೊಳದೊಳಗೆ ಇಳಿದು ತಾವರೆಯ ದಂಟುಗಳನ್ನು ಕಿತ್ತುಕೊ' ಎಂದಳು.

ಆಮೇಲೆ ಪಶುಸಖನು ಹೇಳುತ್ತಾನೆ-

**ಪಶೂನ್ ರಂಜಾಮಿ ದೃಷ್ಟ್ವಾಽಹಂ ಪಶೂನಾಂ ಚ ಸದಾ ಸಖಾ ।**
**ಗೌಣಂ ಪಶುಸಖೇತ್ಯೇವಂ ವಿದ್ಧಿ ಮಾಮಗ್ನಿಸಂಭವೇ ॥**

ಅಗ್ನಿಸಂಭವೇ-ಎಲೌ ಕೃತ್ಯೆ, ಅಹಂ-ನಾನು, ಪಶೂನ್-ಪಶುಗಳನ್ನು, ದೃಷ್ಟ್ವಾ-ನೋಡಿ, ರಂಜಾಮಿ-ಸಂತೋಷಪಡುತ್ತೇನೆ. ಸದಾ-ಯಾವಾಗಲೂ, ಪಶೂನಾಂ-ಪಶುಗಳಿಗೆ, ಸಖಾ-ಮಿತ್ರನು, ಗೌಣಂ-ಗುಣನಿಮಿತ್ತನಾದ, ಪಶುಸಖಾ-ಪಶುಸಖನು, ಇತ್ಯೇವಂ-ಈ ರೀತಿಯಲ್ಲಿ, ಮಾ-ನನ್ನನ್ನು, ವಿದ್ಧಿ-ತಿಳಿ.

ಇಲ್ಲಿ ಪಶುಗಳೆಂದರೆ ಜೀವರು ಎಂದರ್ಥ. ಈಶ್ವರನಿಗೆ ಪಶುಪತಿ ಎಂಬ ಹೆಸರುಂಟಷ್ಟೆ. ಅಲ್ಲಿಯೂ ಪಶುಗಳೆಂದರೆ ಜೀವರೆಂದೇ ಅರ್ಥ. ಈ ವಿಷಯ ಕೃತ್ಯೆಗೆ ಹೊಳೆಯಲಿಲ್ಲ. ಪಶುಗಳೇ ಬಳಿಯಲ್ಲಿಲ್ಲದೆ ಇವನು ಪಶುಸಖ-ನಾಗುವುದು ಹೇಗೆ ಎಂದು ಯೋಚಿಸಿ ಅವನನ್ನೂ ಸರೋವರಕ್ಕೆ ಹೋಗೆಂದಳು.

ತರುವಾಯ ಶುನಃಸಖನ ವೇಷದಲ್ಲಿದ್ದ ದೇವೇಂದ್ರನು ಹೇಳುತ್ತಾನೆ-

''ಎಲೈ ರಾಕ್ಷಸಿ, ಇವರೆಲ್ಲರೂ ಹೇಳಿದಂತೆ ನನ್ನ ಹೆಸರಿಗೆ ವ್ಯುತ್ಪತ್ತಿಯನ್ನು ಪ್ರದರ್ಶಿಸಲು ನನಗೆ ಇಷ್ಟವಿಲ್ಲ. ಇಷ್ಟುಮಾತ್ರ ತಿಳಿದುಕೊ. ನಾನು ಶುನಃಸಖಸಖ !''

ತಾತ್ಪರ್ಯ :- ಶ್ವಾ ಎಂದರೆ ಧರ್ಮ. ಅದಕ್ಕೆ ಸಖರು ಮುನಿಗಳು. ಅವರಿಗೆ ನಾನು ಸಖ.

ಈ ತಾತ್ಪರ್ಯ ಕೃತ್ಯೆಗೆ ಗೊತ್ತಾಗಲಿಲ್ಲ. ಇವನ ಬಳಿ ಶ್ವಾ (ನಾಯಿ) ಇದೆ. ಇವನು ಶುನಃಸಖನಾಗಬಹುದು. ಆದರೆ ಶುನಃಸಖಸಖನೆಂದರೇನು ? ಸಖ ಶಬ್ದವನ್ನು ಎರಡು ಸಲ ಹೇಳಿದ್ದೇಕೆ ?

ಅವಳು ಹೀಗೆಂದಳು ''ನೀನು ಸಂದೇಹ ಹುಟ್ಟುವಂತೆ ಮಾತನಾಡಿದೆ. ಇನ್ನೊಮ್ಮೆ ನಿನ್ನ ಹೆಸರನ್ನು ಹೇಳು.''

ಆಗ ದೇವೇಂದ್ರನು ''ಎಲೈ, ಒಂದು ಸಲ ಹೇಳಿದರೂ ನಿನಗೆ ನನ್ನ ಹೆಸರು ಗೊತ್ತಾಗಲಿಲ್ಲವೆ ? ಪುನಃ ಹೆಸರನ್ನು ಕೇಳುವೆಯಾ ? ಇಗೊ, ನಿನ್ನನ್ನು ಧ್ವಂಸ ಮಾಡುತ್ತೇನೆ'' ಎಂದು ಹೇಳಿ ಬ್ರಹ್ಮದಂಡಸದೃಶವಾದ ತನ್ನ ತ್ರಿದಂಡದಿಂದ ಕೃತ್ಯೆಯ ತಲೆಯ ಮೇಲೆ ಬಡಿದನು. ಕೃತ್ಯೆಯು ನೆಲದ ಮೇಲೆ ಸತ್ತುಬಿದ್ದಳು.

ಅನಂತರ ಶುನಃಸಖನು ಕೊಳದ ತೀರದಲ್ಲಿದ್ದ ಹಲ್ಲುಗಾವಲಿನಲ್ಲಿ ಕುಳಿತುಕೊಂಡನು. ಆಗ ಋಷಿಗಳೆಲ್ಲರೂ ಕೊಳದಲ್ಲಿದ್ದ ತಾವರೆದಂಟುಗಳನ್ನು ಕಿತ್ತು ತೀರದಲ್ಲಿಟ್ಟು ಸ್ನಾನಮಾಡಲು ಪುನಃ ನೀರಿಗೆ ಇಳಿದರು. ಸ್ನಾನಾಹ್ನಿಕ ತರ್ಪಣಗಳನ್ನು ಮುಗಿಸಿಕೊಂಡು ಮೇಲೆ ಬಂದು ನೋಡುತ್ತಾರೆ. ತಾವರೆಯ

ದಂಟುಗಳೆಲ್ಲಾ ಮಾಯವಾಗಿದ್ದವು! ಹಸಿವಿನಿಂದ ನರುಳುತ್ತಿದ್ದ ಅವರಿಗೆ ಬಹಳ ಕೋಪ ಬಂದಿತು. ''ಯಾರು ಈ ತಾವರೆದಂಟುಗಳನ್ನು ಕದ್ದರೋ ಅವರು ಹಾಳಾಗಿ ಹೋಗಲಿ!'' ಎಂದು ಕೂಗಾಡಿದರು! ಆಗ ಶುನಃಸಖನು ''ತಾವರೆ ದಂಟುಗಳನ್ನು ಕದ್ದವನಿಗೆ ಮಂಗಳವಾಗಲಿ!'' ಎನ್ನುತ್ತಾ ಅವರೆದುರಿಗೆ ಬಂದು ನಿಂತನು. ''ಶುನಃಸಖ, ನೀನು ಈ ದಂಟುಗಳನ್ನು ಕದ್ದಿರ ಬೇಕು'' ಎಂಬುದಾಗಿ ಋಷಿಗಳು ಹೇಳಿದರು.

ಆಗ ಶುನಃಸಖನು ''ಮಹರ್ಷಿಗಳೆ, ನಿಮ್ಮ ಮಾತು ಸತ್ಯ. ನಾನೇ ನಿಮ್ಮ ಪರೀಕ್ಷೆ ಮಾಡುವುದಕ್ಕಾಗಿ ಕದ್ದೆನು. ಅಲ್ಲಿ ನೋಡಿ, ರಾಕ್ಷಸಿಯನ್ನು ಕೊಂದು ಹಾಕಿದ್ದೇನೆ. ಅವಳು ನಿಮ್ಮನ್ನು ಕೊಲ್ಲುವುದಕ್ಕಾಗಿ ಬಂದಿದ್ದಳು. ನಿಮ್ಮನ್ನು ರಕ್ಷಿಸುವುದಕ್ಕಾಗಿ ನಾನು ಬಂದೆ. ನಾನು ದೇವೇಂದ್ರ. ಅಲೋಭ ಎಂಬುದು ಬಹಳ ದೊಡ್ಡಗುಣ. ಅದನ್ನು ನೀವು ಸಂಪಾದಿಸಿದ್ದೀರಿ. ಎಂತಹ ಕಷ್ಟಕಾಲ ಬಂದರೂ ವೃಷಾದರ್ಭಿಯ ಹಣಕ್ಕೆ ನೀವು ಆಸೆ ಪಡಲಿಲ್ಲ. ಹಸಿವಿನಿಂದ ನರಳುತ್ತಿದ್ದಾಗಲೂ ನೀವು ಇತರರ ಅನ್ನವನ್ನು ಸ್ವೀಕರಿಸಲಿಲ್ಲ. ನಿಮಗೆ ಅಕ್ಷಯಲೋಕ ದೊರಕಿದೆ. ನನ್ನೊಡನೆ ಸ್ವರ್ಗಲೋಕಕ್ಕೆ ಬನ್ನಿರಿ'' ಎಂದು ಹೇಳಿ ಅವರೆಲ್ಲರನ್ನೂ ಸ್ವರ್ಗಕ್ಕೆ ಕರೆದೊಯ್ದನು.

ಆದ್ದರಿಂದ ಎಂತಹ ಕಷ್ಟಕಾಲದಲ್ಲಿಯೂ ಮನುಷ್ಯನು ಇನ್ನೊಬ್ಬರ ವಸ್ತುವಿಗೆ ಆಶಿಸಬಾರದು. ಅವರು ಕೊಟ್ಟರೂ ಸ್ವೀಕರಿಸಬಾರದು ಎಂದು ಈ ಉಪಾಖ್ಯಾನವು ಬೋಧಿಸುತ್ತದೆ.

ಈ ಉಪಾಖ್ಯಾನಕ್ಕೆ ಇನ್ನೊಂದು ತಾತ್ಪರ್ಯ ಉಂಟು. ಅಭಿಚಾರ ಎಂಬ ಒಂದು ಯಾಗವಿದೆ. ಶತ್ರುವಿಗೆ ಕೇಡಾಗಲೆಂದು ಇದನ್ನು ಮಾಡುತ್ತಾರೆ. ''ಮಾಟ ಮಾಡುವುದು'' ಎಂಬ ಹೇಳಿಕೆ ಇದೆಯಷ್ಟೆ. ಇದು ಅಭಿಚಾರದ ಒಂದು ಭೇದ. ಅಭಿಚಾರದಲ್ಲಿ ಶತ್ರುವಿಗೆ ಕೇಡನ್ನು ಬಯಸುವಾಗ ತಂದೆ-ತಾಯಿಗಳು ನಾಮಕರಣದಲ್ಲಿ ಸಂಕೇತಮಾಡಿದ ಅವನ ಹೆಸರು ಬೇಕಾಗುತ್ತದೆ. ಆದ್ದರಿಂದಲೇ ಮನುಷ್ಯನು ತನ್ನ ನಿಜವಾದ ಹೆಸರನ್ನು ಬಹಿರಂಗ ಪಡಿಸ-ಕೂಡದು. ಗೃಹ್ಯಸೂತ್ರದಲ್ಲಿ ನಾಮಪ್ರಕರಣದಲ್ಲಿ ಈ ಮಾತನ್ನು ಸ್ಪಷ್ಟವಾಗಿ ಹೇಳಿದೆ. ''ನಾಕ್ಷತ್ರಂ ನಾಮ ನಿರ್ದಿಶತಿ. ತದ್ರಹಸ್ಯಂ ಭವತಿ.'' ಉಪನಯನ-

ಪರ್ಯಂತ ಈ ಹೆಸರು ತಂದೆತಾಯಿಗಳಿಗೆ ಮಾತ್ರ ಗೊತ್ತಿರಬೇಕು. ಉಪನಯನದಲ್ಲಿ ಗುರುವಿಗೆ ಮಾತ್ರ ಇದನ್ನು ತಿಳಿಸಬೇಕು. ಇನ್ನು ಯಾರಿಗೂ ಹೇಳಬಾರದು. ಆದ್ದರಿಂದಲೇ ''ಆತ್ಮನಾಮ ಗುರೋರ್ನಾಮ....'' ಎಂದು ಧರ್ಮಶಾಸ್ತ್ರವು ಮನುಷ್ಯನು ತನ್ನ ಹೆಸರು ಹೇಳಬಾರದೆಂದು ನಿಷೇಧಿಸುತ್ತದೆ. ಇದೆಲ್ಲಾ ನಾಮಕರಣದಲ್ಲಿ ಪಿತೃಸಂಕೇತಿತ ನಾಮಕ್ಕೆ ಅನ್ವಯಿಸುತ್ತದೆ. ವ್ಯವಹಾರದ ಸೌಕರ್ಯಕ್ಕಾಗಿ ಮನುಷ್ಯನು ಬೇರೆ ಹೆಸರೊಂದನ್ನಿಟ್ಟುಕೊಂಡಿರಬೇಕು. ಅದನ್ನು ಯಾರಿಗಾದರೂ ಬಹಿರಂಗಪಡಿಸಬಹುದು. ಅದಕ್ಕೆ ವ್ಯಾವಹಾರಿಕ ನಾಮವೆಂದು ಹೆಸರು. ಆದುದರಿಂದಲೇ ಋಷಿಗಳು ತಮ್ಮ ಹೆಸರನ್ನು ಸ್ಪಷ್ಟವಾಗಿ ತಿಳಿಸಲಿಲ್ಲ. ಹೆಸರು ಗೊತ್ತಾಗದುದರಿಂದ ಕೃತ್ಯೆಗೆ ಅವರನ್ನು ಹಿಂಸೆಪಡಿಸಲು ಸಾಧ್ಯವಾಗಲಿಲ್ಲ.



ಮಹಾಭಾರತ ಯುದ್ಧವು ಸಮಾಪ್ತವಾಯಿತು. ಧರ್ಮರಾಜನು ಹಸ್ತಿನಾವತಿಯಲ್ಲಿ ಪಟ್ಟಾಭಿಷಿಕ್ತನಾಗಿ ರಾಜ್ಯಕಾರ್ಯದಲ್ಲಿ ತೊಡುಗುವುದರಲ್ಲಿದ್ದನು. ಶ್ರೀಕೃಷ್ಣನ ಸಂಕಲ್ಪವು ನೆರವೇರಿತು. ಪಾಂಡವರಿಗೆ ರಾಜ್ಯವನ್ನು ಗಳಿಸಿ ಕೊಟ್ಟದ್ದಾಯಿತು. ಇನ್ನು ಅವರು ಧರ್ಮದಿಂದ ರಾಜ್ಯಪಾಲನೆ ಮಾಡಿ ಪ್ರಜೆಗಳಿಗೆ ಸುಖಶಾಂತಿಗಳನ್ನುಂಟುಮಾಡಬೇಕಾಗಿತ್ತು. ಧರ್ಮರಾಜನಿಗೆ ರಾಜ್ಯವು ಸ್ಥಿರವಾಗಿ ಉಳಿಯುವಂತೆ ಮಾಡಬೇಕಾಗಿತ್ತು. ಆದ್ದರಿಂದ ಪಾಂಡವರಿಗೆ ಧರ್ಮವನ್ನೂ, ವಿಶೇಷವಾಗಿ ರಾಜನೀತಿಯನ್ನು ಬೋಧಿಸಬೇಕಾಗಿತ್ತು. ಬೋಧಿಸಲು ದಕ್ಷರಾದವರು ಯಾರು ? ಶರತಲ್ಪಶಾಯಿಯಾಗಿದ್ದ ಭೀಷ್ಮಾಚಾರ್ಯನಿಗಿಂತ ದಕ್ಷರು ಯಾರು ? ಭಗವಂತನು ಧರ್ಮರಾಜನನ್ನು ಕರೆದು ''ಯುಧಿಷ್ಠಿರ, ನಿನ್ನ ಪಿತಾಮಹನಾದ ಭೀಷ್ಮನು ಶರತಲ್ಪದಲ್ಲಿ ಮಲಗಿರುವನು. ಸಕಲ ಧರ್ಮಗಳ ಸ್ವರೂಪವನ್ನೂ, ರಾಜನೀತಿಯನ್ನೂ ಅವನು ಬಲ್ಲನು. ಅವನು ಜ್ಞಾನದ ಗಣಿಯಾಗಿದ್ದಾನೆ. ಅವನು ಸ್ವರ್ಗಸ್ಥನಾದ ಮೇಲೆ ಜ್ಞಾನದ ಕೋಶವೇ ಅಸ್ತವಾಗುವುದೆಂದು ತಿಳಿ. ಈ ಸಮಯದಲ್ಲಿ ನೀನು ಭೀಷ್ಮಾಚಾರ್ಯನ ಬಳಿಗೆ ಹೋಗಿ ಧರ್ಮಸ್ವರೂಪವನ್ನು ಉಪದೇಶಿಸುವಂತೆ ಪ್ರಾರ್ಥಿಸು. ದಯಾಶಾಲಿಯಾದ ಆತನು ಎಲ್ಲವನ್ನೂ ನಿನಗೆ ತಿಳಿಯಹೇಳುವನು'' ಎಂದನು.

ಅನಂತರ ಧರ್ಮರಾಜನು ಶ್ರೀಕೃಷ್ಣನನ್ನು ಮುಂದುಮಾಡಿಕೊಂಡು ತನ್ನ ತಮ್ಮಂದಿರೊಡನೆ ಭೀಷ್ಮನ ಬಳಿಗೆ ಹೋಗಿ ಸಾಷ್ಟಾಂಗ ಪ್ರಣಾಮ ಮಾಡಿದನು. ಶ್ರೀಕೃಷ್ಣನು ಬಂದ ಉದ್ದೇಶವನ್ನು ಪ್ರತಿದಿನವೂ ತಮ್ಮ ನಿತ್ಯಕರ್ಮಗಳನ್ನು ತೀರಿಸಿಕೊಂಡು ಬಂದು ಪಾಂಡವರು ಉಪದೇಶವನ್ನು ಕೇಳುತ್ತಿದ್ದರು.

ಈ ಭಾಗಕ್ಕೆ ಶಾಂತಿಪರ್ವ ಎಂದು ಹೆಸರಿದೆ. ಧರ್ಮದ ವಿವೇಚನೆಯು ವಿಸ್ತಾರವಾಗಿ ಇಲ್ಲಿ ನಡೆದಿದೆ. ರಾಜಧರ್ಮವನ್ನು ಬೋಧಿಸುವಾಗ ರಾಜನು ನವಿಲಿನಂತೆ ನಡೆದುಕೊಳ್ಳಬೇಕೆಂದು ಭೀಷ್ಮನು ಹೇಳುತ್ತಾನೆ. ಆ ಸಂದರ್ಭದಲ್ಲಿ ಈ ಶ್ಲೋಕಗಳು ಬರುತ್ತವೆ. ಭಾರತದಲ್ಲಿ ಇಂತಹ ಶ್ಲೋಕಗಳು ಬಹಳ ಇವೆ.

ಈ ಶ್ಲೋಕಗಳಲ್ಲಿ ಕಠಿಣವಾದ ಶಬ್ದವಿಲ್ಲದಿದ್ದರೂ, ಅನ್ವಯ ತಾತ್ಪರ್ಯಗಳು ಸುಲಭವಾಗಿಲ್ಲ. ಸಂದರ್ಭೋಚಿತವಾಗಿ ಅರ್ಥವನ್ನು ಶ್ರಮದಿಂದ ಹೊರ-ಗೆಡಹಬೇಕಾಗುತ್ತದೆ. ಇದಕ್ಕೆ ನೀಲಕಂಠೀಯ ವ್ಯಾಖ್ಯಾನವೂ ಹೆಚ್ಚು ಸಹಾಯ ಮಾಡುವುದಿಲ್ಲ. ಆದ್ದರಿಂದ ಸ್ವತಃ ಕ್ಲೇಶದಿಂದ ಅರ್ಥವನ್ನು ಬರೆಯುವ ಸಾಹಸ ಮಾಡಿದ್ದೇನೆ. ಅರ್ಥದಲ್ಲೇನಾದರೂ ದೋಷವು ಕಂಡುಬಂದರೆ ವಿದ್ವಾಂಸರು ಕ್ಷಮಿಸಬೇಕಾಗಿ ಪ್ರಾರ್ಥನೆ.

**ನಿತ್ಯಂ ರಕ್ಷಿತಮಂತ್ರಃ ಸ್ಯಾದ್ಯಥಾ ಮೂಕಃ ಶರಚ್ಛಿಖೀ ।**
**ಶ್ಲಕ್ಷ್ಣಾಕ್ಷರತನುಃ ಶ್ರೀಮಾನ್ ಭವೇಚ್ಛಾಸ್ತ್ರವಿಶಾರದಃ ॥**

(ಶಾಂತಿ. ಅಧ್ಯಾಯ- 120)

ರಾಜನು, ಶರಚ್ಛಿಖೀ-ಶರತ್ಕಾಲದ ನವಿಲು, ಯಥಾ ಮೂಕಃ-ಮೂಕ-ವಾಗಿರುವಂತೆ, ನಿತ್ಯಂ-ಯಾವಾಗಲೂ, ರಕ್ಷಿತಮಂತ್ರಃ ಸ್ಯಾತ್-ಮಂತ್ರಾ-ಲೋಚನೆಯನ್ನು ರಕ್ಷಿಸತಕ್ಕವನು ಆಗಬೇಕು. ಮತ್ತು, ಶ್ಲಕ್ಷ್ಣಾಕ್ಷರತನುಃ-ಮೃದುವಾದ ಮಾತು ಮತ್ತು ಶರೀರವುಳ್ಳವನೂ, ಶ್ರೀಮಾನ್-ಧನವಂತನೂ, ಶಾಸ್ತ್ರವಿಶಾರದಃ-ರಾಜ್ಯಶಾಸ್ತ್ರದಲ್ಲಿ ಪಾರಂಗತನೂ, ಭವೇತ್-ಆಗಬೇಕು. (ನವಿಲಿನ ಪಕ್ಷದಲ್ಲಿ) ಶ್ಲಕ್ಷ್ಣ-ಮೃದುವಾದ, ಅಕ್ಷರ-ಅಕ್ಷರಾಕಾರದ ರೇಖೆಗಳಿಂದ ಕೂಡಿದ, ತನುಃ-ದೇಹ ಉಳ್ಳದ್ದು, ಶ್ರೀಮಾನ್-ಸುಂದರವಾದದ್ದು, ಶಾಸ್ತ್ರ-ಕಾಮಕಲೆಯಲ್ಲಿ, ವಿಶಾರದಃ-ನಿಪುಣವಾದದ್ದು.

ತಾತ್ಪರ್ಯ :- ವರ್ಷಾಕಾಲದಲ್ಲಿ ಕೇಕೆ ಹಾಕುವ ನವಿಲು ಶರತ್ಕಾಲದಲ್ಲಿ ಮೌನವಾಗಿರುತ್ತದೆ. ರಾಜನಿಗೆ ಶರದೃತು ದಿಗ್ವಿಜಯಕಾಲ. ಆಗ ರಾಜನು ತನ್ನ ಮಂತ್ರಾಲೋಚನೆಯನ್ನು ಯಾರಿಗೂ ತಿಳಿಸಬಾರದು. ಅವನ ಮಾತುಗಳೂ, ವರ್ತನೆಗಳೂ ವಿನಯಯುಕ್ತವಾಗಿರಬೇಕು. ಅವನು ಧನವಂತನೂ, ರಾಜನೀತಿ-ಯನ್ನು ಸಮಗ್ರವಾಗಿ ತಿಳಿದವನೂ ಆಗಿರಬೇಕು. ಅರ್ಥಶ್ಲೇಷದಿಂದ ಇಲ್ಲಿ ನವಿಲಿಗೂ, ರಾಜನಿಗೂ ಸಾದೃಶ್ಯವನ್ನು ಹೇಳಿದ್ದಾರೆ.

**ಆಪದ್ದ್ವಾರೇಷು ಯುಕ್ತಃ ಸ್ಯಾಜ್ಜಲಪ್ರಸ್ರವಣೇಷ್ವಿವ ।**
**ಶೈಲವರ್ಷೋದಕಾನೀವ ದ್ವಿಜಾನ್‌ಸಿದ್ಧಾನ್‌ಸಮಾಶ್ರಯೇತ್ ॥**

ಜಲಪ್ರಸ್ರವಣೇಷ್ವಿವ-ಜಲಪೂರಿತ ಗಿರಿನದಿಗಳಂತೆ, ಆಪದ್ದ್ವಾರೇಷು-ವಿಪತ್ತುಗಳಿಗೆ ಕಾರಣವಾದ ರಾಜದ್ರೋಹಿಗಳ ವಿಷಯದಲ್ಲಿ, ಯುಕ್ತಃ-ಎಚ್ಚರಿಕೆಯುಳ್ಳವನು, ಸ್ಯಾತ್-ಆಗಬೇಕು. ಶೈಲವರ್ಷೋದಕಾನೀವ-ಬೆಟ್ಟದ ಮೇಲೆ ಸುರಿಯುವ ಮಳೆಯ ನೀರಿನಂತಿರುವ, ಸಿದ್ಧಾನ್-ರಾಜಭಕ್ತಿಯಲ್ಲಿ ಪರೀಕ್ಷಿತರಾದ, ದ್ವಿಜಾನ್-ಬ್ರಾಹ್ಮಣ ಪಂಡಿತರನ್ನು, ಸಮಾಶ್ರಯೇತ್-ಆಶ್ರಯಿಸಬೇಕು.

ತಾತ್ಪರ್ಯ :- ನವಿಲುಗಳು ಗಿರಿನದಿಗಳಲ್ಲಿ ನೀರು ಕುಡಿಯಲು ಹೋದರೆ ಅಪಾಯ ನಿಶ್ಚಯ. ಆದ್ದರಿಂದ ಅವು ಮಳೆಯ ನೀರಿನಿಂದ ತಮ್ಮ ಬಾಯಾರಿಕೆ-ಯನ್ನು ತೀರಿಸಿಕೊಳ್ಳುತ್ತವೆ. ಹಾಗೆ ರಾಜನು ದ್ರೋಹಿಗಳನ್ನು ವರ್ಜಿಸಿ ವಿಶ್ವಾಸಪಾತ್ರರನ್ನೇ ನಂಬಬೇಕು.

**ಅರ್ಥಕಾಮಃ ಶಿಖಾಂ ರಾಜಾ ಕುರ್ಯಾದ್ಧರ್ಮಧ್ವಜೋಪಮಾಂ ।**
**ನಿತ್ಯಮುದ್ಯತದಂಡಃ ಸ್ಯಾದಾಚರೇದಪ್ರಮಾದತಃ ।**
**ಲೋಕೇ ಚಾಯವ್ಯಯೌ ದೃಷ್ಟ್ವಾ ಬೃಹದ್ವೃಕ್ಷಮಿವಾಸ್ರವತ್ ॥**

ರಾಜಾ-ರಾಜನು, ಅರ್ಥಕಾಮಃ-ಧನಾರ್ಜನೆಯಲ್ಲಿ ಆಸಕ್ತಿಯುಳ್ಳವ-ನಾಗಿ, ಧರ್ಮಧ್ವಜೋಪಮಾಂ-ಧರ್ಮಧ್ವಜದಂತಿರುವ, ಶಿಖಾಂ-ಶಿಖೆಯನ್ನು, ಚಿಹ್ನೆಯನ್ನು, ಕುರ್ಯಾತ್-ಧರಿಸಬೇಕು. ನಿತ್ಯ-ಯಾವಾಗಲೂ, ಉದ್ಯತದಂಡಃ-ಸ್ಯಾತ್-ದಂಡನೀತಿಯನ್ನು ಪಾಲಿಸಬೇಕು. ಲೋಕೇ-ಜನರಲ್ಲಿ, ಆಯವ್ಯಯೌ

-ಆದಾಯವೆಚ್ಚಗಳನ್ನು, ದೃಷ್ಟ್ವಾ-ಪರಿಶೀಲಿಸಿ, ಆಸ್ರವತ್-ಮದ್ಯವನ್ನು ಸುರಿ-ಸುವ, ಬೃಹದ್ವೃಕ್ಷಮಿವ-ತಾಳೆಯ ಮರಗಳಿರುವ ವನವನ್ನು ಹೇಗೋ ಹಾಗೆ, ಅಪ್ರಮಾದತಃ -ಎಚ್ಚರಿಕೆಯಿಂದ, ಆಚರೇತ್-ದಂಡವನ್ನು ವಿಧಿಸಬೇಕು.

ತಾತ್ಪರ್ಯ :- ಧರ್ಮದ ಚಿಹ್ನೆಯನ್ನು ಧರಿಸಿ ಅನೇಕರು ಲೋಕದಲ್ಲಿ ಸ್ವಾರ್ಥಕ್ಕಾಗಿ ಧನಾರ್ಜನೆ ಮಾಡುತ್ತಾರೆ. ರಾಜನೂ ಧರ್ಮರಕ್ಷಣದ ನೆವದಿಂದ ಹಣವನ್ನು ಪ್ರಜೆಗಳಿಂದ ಸಂಗ್ರಹಿಸಬೇಕು. ಜನರ ಆದಾಯ ವೆಚ್ಚಗಳನ್ನು ಲೆಕ್ಕಿಸಿ ಅವರಿಂದ ಹಣವನ್ನು ವಸೂಲು ಮಾಡಬೇಕು. ಪ್ರಜೆಗಳೇ ಹಣಕ್ಕೆ ಆಧಾರ-ವಾದ್ದರಿಂದ ಕಬ್ಬಿನಿಂದ ರಸವನ್ನು ಹೀರಿದಂತೆ ಹೀರಿ ಬಿಡಬಾರದು. ಹೆಂಡ-ವನ್ನಿಳಿಸುವವನು ತಾಳೆಯ ಮರಗಳಿಂದ ಉಪಾಯವಾಗಿ ಹೆಂಡವನ್ನಿಳಿಸು-ವಂತೆ ಪ್ರಜೆಗಳಿಂದ ಉಪಾಯವಾಗಿ ಧನವನ್ನು ಸಂಗ್ರಹಿಸಬೇಕು.

ನವಿಲುಗಳು ಕಾಮಾರ್ಥವಾಗಿ ತಮ್ಮ ಶಿಖೆಯನ್ನು ಎತ್ತಿಕೊಂಡು ಕುಣಿಯು-ತ್ತವೆ. ಇತರ ಹೆಣ್ಣು ನವಿಲುಗಳನ್ನು ರಕ್ಷಿಸುತ್ತಾ ತಮ್ಮ ಅಧೀನದಲ್ಲಿಟ್ಟು-ಕೊಂಡಿರುತ್ತವೆ. ಬೇಟೆಗಾರನ ಆಗಮನ ನಿರ್ಗಮನಗಳನ್ನು ತಿಳಿದುಕೊಂಡು ಎಚ್ಚರಿಕೆಯಿಂದ ದೊಡ್ಡಮರ (ಬೃಹದ್ವೃಕ್ಷ)ಗಳಲ್ಲಿ ಅಡಗಿಕೊಳ್ಳುತ್ತವೆ. ಈ ಶ್ಲೋಕದಲ್ಲಿ ಕೇವಲ ಶಬ್ದಸಾದೃಶ್ಯವಿದೆ. ಅರ್ಥಸಾದೃಶ್ಯವಿಲ್ಲ.

**ಮೃಜಾವಾನ್‌ಸ್ಯಾತ್ ಸ್ವಯೂಥ್ಯೇಷು ಭೌಮಾನಿ ಚರಣೈಃ ಕ್ಷಿಪೇತ್ ।**
**ಜಾತಪಕ್ಷಃ ಪರಿಸ್ಪಂದೇತ್ ಪ್ರೇಕ್ಷೇದ್ವೈಕಲ್ಯಮಾತ್ಮನಃ ॥**

ಸ್ವಯೂಥ್ಯೇಷು-ತನ್ನ ಬಳಗದಲ್ಲಿ, ಮೃಜಾವಾನ್-ಆತ್ಮಶುದ್ಧಿಯುಳ್ಳವನು, ಸ್ಯಾತ್-ಆಗಬೇಕು. ಭೌಮಾನಿ-ಭೂಮಿಯಲ್ಲಿ ಒದಗುವ ವಿಪತ್ತುಗಳನ್ನು, ರಣೈಃ-ಯುದ್ಧಗಳಿಂದ, ಕ್ಷಿಪೇತ್-ಹೋಗಲಾಡಿಸಿಕೊಳ್ಳಬೇಕು. ಜಾತಪಕ್ಷಃ-ಸಹಾಯಕರು ದೊರಕಿದಾಗ, ಪರಿಸ್ಪಂದೇತ್-ಚಲಿಸಬೇಕು. (ಉದ್ಯೋಗಪರ-ನಾಗಬೇಕು.) ಆತ್ಮನಃ-ತನ್ನ, ವೈಕಲ್ಯಂ-ನ್ಯೂನತೆಯನ್ನು, ಪ್ರೇಕ್ಷೇತ್-ನೋಡಿ-ಕೊಳ್ಳುತ್ತಿರಬೇಕು.

(ನವಿಲಿನ ಪಕ್ಷದಲ್ಲಿ) ಸ್ವಯೂಥ್ಯೇಷು-ತನ್ನ ನವಿಲು ಹಿಂಡುಗಳ ಮಧ್ಯ-ದಲ್ಲಿ, ಮೃಜಾವಾನ್-ಸ್ವಚ್ಛದೇಹವುಳ್ಳವನು, ಸ್ಯಾತ್-ಆಗಬೇಕು, ಭೌಮಾನಿ-

ಭೂಮಿಯಲ್ಲಿರುವ ವಸ್ತುಗಳನ್ನು, ಚರಣೈಃ-ಕಾಲುಗಳಿಂದ, ಕ್ಷಿಪೇತ್-ಕೆದಕಿ-ನೋಡಬೇಕು. ಜಾತಪಕ್ಷಃ-ರೆಕ್ಕೆಗಳು ಬಲಿತಾಗ, ಪರಿಸ್ಪಂದೇತ್-ಹೊರಗಡೆ ಚಲಿಸಬೇಕು. ವೈ-ನಿಶ್ಚಯವಾಗಿಯೂ, ಆತ್ಮನಃ-ತನ್ನ, ಕಲ್ಯಂ-ಹಿತವನ್ನು, ಪ್ರೇಕ್ಷೇತ್-ನೋಡಿಕೊಳ್ಳಬೇಕು.

**ಪ್ರಾವೃಷೀವಾಸಿತಗ್ರೀವೋ ಮಜ್ಜೇತ ನಿಶಿ ನಿರ್ಜನೇ ।**
**ಮಾಯೂರೇಣ ಗುಣೇನೈವ ಸ್ತ್ರೀಭಿಶ್ಚಾವೇಕ್ಷಿತಶ್ಚರೇತ್ ॥**

ನಿರ್ಜನೇ-ಜನರಹಿತವಾದ ಕಾಡಿನಲ್ಲಿ, ನಿಶಿ-ರಾತ್ರಿಯಲ್ಲಿ, ಅಸಿತಗ್ರೀವ ಇವ-ನವಿಲಿನಂತೆ, ಪ್ರಾವೃಷಿ-ಮಳೆಗಾಲದಲ್ಲಿ, ನಿಶಿ-ರಾತ್ರಿಕಾಲದಲ್ಲಿ, ಮಜ್ಜೇತ -ಅಂತಃಪುರದಲ್ಲಿ ಗೂಢವಾಗಿ ಅಡಗಿರಬೇಕು. ಮಾಯೂರೇಣ-ನವಿಲಿನ, ಗುಣೇನ-ಗುಣದಿಂದ ಸ್ತ್ರೀಭಿಃ-ಅಂತಃಪುರಸ್ತ್ರೀಯರಿಂದ, ಅವೇಕ್ಷಿತಃ ಏವ-ಈಕ್ಷಿತನಾಗಿಯೇ, ಚರೇತ್-ಸಂಚರಿಸಬೇಕು.

ತಾತ್ಪರ್ಯ :- ನವಿಲು ರಾತ್ರಿಯ ಹೊತ್ತು ಜನರಿಗೆ ಕಾಣಿಸದೆ ಎಲ್ಲಿಯೋ ಅಡಗಿರುವುದು. ಅದು ಮಳೆಗಾಲದಲ್ಲಿ ಹೆಣ್ಣು ನವಿಲುಗಳನ್ನು ಮೆಚ್ಚಿಸುವುದ-ಕ್ಕಾಗಿ ಕೇಕೆ ಹಾಕುತ್ತಾ ನರ್ತನಮಾಡುತ್ತದೆ. ಹಾಗೆಯೇ ರಾಜನು ಇತರ ಕಾಲ-ಗಳಲ್ಲಿ ರಾಜಕಾರ್ಯತತ್ಪರನಾಗಿದ್ದರೂ ಮಳೆಗಾಲದಲ್ಲಿ ರಾಜಧಾನಿಯಲ್ಲಿಯೇ ಇರುತ್ತಾನಾದ್ದರಿಂದ ಆಗ ಅಂತಃಪುರಸ್ತ್ರೀಯರನ್ನು ಪರೀಕ್ಷಿಸಿ ನೋಡಬೇಕು. ತಾನು ಅವರಲ್ಲಿ ಪ್ರೇಮವುಳ್ಳವನಂತೆ ನಟಿಸುತ್ತಾ ತನ್ನ ಅಂತರಂಗವನ್ನು ಅವರಿಗೆ ಬಿಟ್ಟುಕೊಡದೆ ಅವರ ಮನೋರಂಜನೆ ಮಾಡುತ್ತಲೇ ಅಂತಃಪುರಸ್ತ್ರೀಯರ ನಡತೆಯ ಬಗ್ಗೆ ಎಚ್ಚರಿಕೆಯಿಂದಿರಬೇಕು.

**ನಾಶಯೇದ್ಬಲಬರ್ಹಾಣಿ ಸಂನಿವಾಸಾನ್ನಿವಾಸಯೇತ್ ।**
**ಸರ್ವತಶ್ಚಾದದೇತ್ ಪ್ರಜ್ಞಾಂ ಪತಂಗಂ ಗಹನೇಷ್ವಿವ ॥**

ಬಲಬರ್ಹಾಣಿ-ಬಲ-ಸೈನ್ಯದ, ಬರ್ಹಾಣಿ-ಪುಕ್ಕಗಳಂತೆ ಅಲಂಕಾರ ಪ್ರಾಯರಾದ ನಟವಿಟರನ್ನು, ನಾಶಯೇತ್-ದೂರಮಾಡಬೇಕು. ಸಂ-ನಿವಾಸಾನ್-ಉತ್ತಮರಾದ ಮಂತ್ರಿ ಮುಂತಾದ ಶೂರರನ್ನು, ನಿವಾಸಯೇತ್-ಸ್ಥಿರವಾಗಿ ಉಳಿಸಿಕೊಳ್ಳಬೇಕು. (ನವಿಲಿನ ಪಕ್ಷದಲ್ಲಿ) ಬಲಬರ್ಹಾಣಿ-ಬೆಳೆದು

ಹೋದ ಗರಿಗಳನ್ನು, ನಾಶಯೇತ್- ಉದರಿಸಬೇಕು. ಸಂನಿವಾಸಾನ್- ದೃಢ-ವಾದ ಗರಿಗಳನ್ನು, ನಿವಾಸಯೇತ್- ಉಳಿಸಿಕೊಳ್ಳಬೇಕು.

ಗಹನೇಷು- ಅರಣ್ಯಗಳಲ್ಲಿ, ಪತಂಗಮಿವ- ಹುಳುಗಳನ್ನು ನವಿಲು ಆರಿಸಿ-ಕೊಳ್ಳುವಂತೆ, ರಾಜನು, ಸರ್ವತಃ- ಎಲ್ಲಾ ಕಡೆಯಿಂದಲೂ, ಪ್ರಜ್ಞಾಂ- ವಿದ್ಯೆ-ಯನ್ನು, ಆದದೇತ್- ಸ್ವೀಕರಿಸಬೇಕು.



ಧರ್ಮರಾಜನು ಭೀಷ್ಮಾಚಾರ್ಯರನ್ನು ಕುರಿತು ಧರ್ಮಾರ್ಥಕಾಮಮೋಕ್ಷ-ಗಳೆಂಬ ಚತುರ್ವರ್ಗದ ವಿಷಯದಲ್ಲಿ ಅನೇಕ ಪ್ರಶ್ನೆಗಳನ್ನು ಮಾಡುತ್ತಾನೆ. ಆ ಸಂದರ್ಭದಲ್ಲಿ ಭೀಷ್ಮಾಚಾರ್ಯರು ಹೇಳುತ್ತಾರೆ-

**ಶ್ರೇಷ್ಠೇ ಬುದ್ಧಿಸ್ತ್ರಿವರ್ಗಸ್ಯ ಯದಯಂ ಪ್ರಾಪ್ನುಯಾನ್ನರಃ ।**
**ಕರ್ಮಣಾ ಬುದ್ಧಿಪೂರ್ವೇಣ ಭವತ್ಯರ್ಥೋ ನ ವಾ ಪುನಃ ॥**

(ಶಾಂತಿ 123-8)

ಈ ಸನ್ನಿವೇಶದಲ್ಲಿ ಬರುವ ಶ್ಲೋಕಗಳಲ್ಲಿ ಕಠಿಣವಾದ ಶಬ್ದ ಯಾವುದೂ ಇಲ್ಲ. ಆದರೂ ಇಲ್ಲಿರುವ ಶಬ್ದಗಳಿಗೆ ನಿಷ್ಕೃಷ್ಟವಾದ ಅರ್ಥ ಯಾವುದೆಂಬುದು ತಿಳಿಯುವುದಿಲ್ಲ. ಎಲ್ಲವೂ ಸಾಮಾನ್ಯ ಶಬ್ದಗಳಾಗಿದ್ದು ತಾತ್ಪರ್ಯವೇನೆಂಬುದು ಎಷ್ಟು ಗುಣಿಸಿದರೂ ಹೊಳೆಯುವುದಿಲ್ಲ. ಆದ್ದರಿಂದ ಸಂಪ್ರದಾಯಕ್ರಮದ ವ್ಯಾಖ್ಯಾನದ ಬಲದಿಂದಲೇ ನಿಯತವಾದ ಅರ್ಥವನ್ನು ಗೊತ್ತುಮಾಡಿ ತಾತ್ಪರ್ಯ-ವನ್ನು ಹೊರಗೆಡಹಬೇಕಾಗಿದೆ.

ತ್ರಿವರ್ಗಸ್ಯ- ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗಕ್ಕೆ, ಶ್ರೇಷ್ಠೇ- ಇವುಗಳಿ-ಗಿಂತ ಉತ್ತಮವಾದ ಮೋಕ್ಷದಲ್ಲಿ, ಬುದ್ಧಿಃ- ತಾತ್ಪರ್ಯವಿದೆ. ಯಾವಾಗ ? ಅಯಂ- ಈ, ನರಃ- ಮನುಷ್ಯನು, ಮೋಕ್ಷವನ್ನು, ಯತ್ ಪ್ರಾಪ್ನುಯಾತ್-ಪಡೆಯುವಾಗ ಮಾತ್ರ, ಬುದ್ಧಿಪೂರ್ವೇಣ- ಫಲಾಸಕ್ತಿಯಿಂದ ಕೂಡಿದ, ಕರ್ಮಣಾ- ಕರ್ಮದಿಂದ, ಅರ್ಥಃ- ಫಲವು, ಭವತಿ- ಆದೀತು, ಪುನಃ- ಮತ್ತೆ, ನ ವಾ- ಆಗದೆಯೂ ಇದ್ದೀತು.

ತಾತ್ಪರ್ಯ :- ನಿಜವಾದ ಪುರುಷಾರ್ಥ ಮೋಕ್ಷ ಒಂದೇ. ಧರ್ಮ, ಅರ್ಥ, ಕಾಮಗಳು ಮೋಕ್ಷಕ್ಕೆ ಸಹಕಾರಿಗಳು. ಸಾಮಾನ್ಯ ಜನರಿಗೆ ಅರ್ಥ, ಕಾಮಗಳೆರಡೇ ಪುರುಷಾರ್ಥ. ಧರ್ಮವು ಅವೆರಡಕ್ಕೆ ಸಾಧನ, ಪಂಡಿತನಿಗೆ ಮೋಕ್ಷ ಮಾತ್ರ ಪುರುಷಾರ್ಥ. ಉಳಿದ ಮೂರು ಅದಕ್ಕೆ ಸಾಧನಗಳು. ಆದ್ದರಿಂದ ಈ ತ್ರಿವರ್ಗದ ಉದ್ದೇಶ ಶ್ರೇಷ್ಠವಾದ ಮೋಕ್ಷವನ್ನು ಪಡೆಯಲು ದಾರಿಮಾಡಿಕೊಡುತ್ತದೆ. ಇದಾದರೂ ಮನುಷ್ಯನಿಗೆ ಮೋಕ್ಷದಲ್ಲಿ ಇಚ್ಛೆಯಿದ್ದರೆ ಮಾತ್ರ. ಅದಿಲ್ಲದೆ ಅರ್ಥ, ಕಾಮಗಳೆಂಬ ಫಲಾಭಿಸಂಧಿಯಿಂದ ಮಾಡುವ ಧರ್ಮವು ಉಚಿತ-ವಾದ್ದಲ್ಲ. ಅದು ಫಲವನ್ನು ಕೊಟ್ಟರೂ ಕೊಡಬಹುದು, ಕೊಡದೆಯೂ ಇರಬಹುದು.

**ಅರ್ಥಾರ್ಥಮನ್ಯದ್‌ಭವತಿ ವಿಪರೀತಮಥಾಪರಂ ।**
**ಅನರ್ಥಾರ್ಥಮ ವಾಪ್ಯಾರ್ಥಮನ್ಯತ್ರಾದ್ಯೋಪಕಾರಕಂ ॥**
**ಬುದ್ಧ್ಯಾಬುದ್ಧಿರಿಹಾರ್ಥೇನ ತದಜ್ಞಾನನಿಕೃಷ್ಟಯಾ ॥**

ಇದರ ಆಪಾತಾರ್ಥವನ್ನು ಮೊದಲು ನೋಡೋಣ. ಒಂದು ಅರ್ಥಕ್ಕೆ ಕಾರಣವಾಗುತ್ತದೆ. ಇನ್ನೊಂದು ಇದಕ್ಕೆ ವಿಪರೀತವೂ ಆಗಬಹುದು. ಅನರ್ಥ-ಕ್ಕಾಗಿ ಅರ್ಥವನ್ನು ಪಡೆದು ಬೇರೆಯ ಕಡೆ ಮೊದಲನೆಯದಕ್ಕೆ ಉಪಕಾರ ಮಾಡುತ್ತದೆ. ಈ ವಿಷಯದಲ್ಲಿ ಅಜ್ಞಾನಕ್ಕಿಂತ ನಿಕೃಷ್ಟವಾದ ಬುದ್ಧಿಯಿಂದ ಫಲಕ್ಕೋಸ್ಕರ ಬುದ್ಧಿಯಿಡುವುದು (ಉತ್ತಮ)!

ಈ ಮಾತುಗಳಿಂದ ಬೋಧವೇ ಆಗುವುದಿಲ್ಲ. ನಿದ್ರೆಯಲ್ಲಿ ಕನವರಿಸುವ ಮನುಷ್ಯನ ಮಾತುಗಳಂತೆ ಅನ್ವಯ, ತಾತ್ಪರ್ಯವೇನೂ ಇಲ್ಲದಂತೆ ತೋರುತ್ತದೆ

ವಾಸ್ತವಾರ್ಥ :- ಅನ್ಯತ್-ಧರ್ಮಕ್ಕೆ ಅತಿರಿಕ್ತವಾದ ನೌಕರಿ, ಕೃಷಿ ಮುಂತಾದ ಕೆಲಸವೂ, ಅರ್ಥಾರ್ಥಂ-ಧನಾರ್ಜನೆಗೆ, ಭವತಿ-ಕಾರಣ-ವಾಗುತ್ತದೆ. ಅಥ-ಅಷ್ಟೇ ಅಲ್ಲ. ವಿಪರೀತಂ-ಇದಕ್ಕೆ ವಿರುದ್ಧವಾದ, ಮತಂ-ಇನ್ನೊಂದು ಮತವೂ ಇದೆ. (ಕಳ್ಳತನದಿಂದ ಅಥವಾ ಆಕಸ್ಮಿಕವಾಗಿ ಹಣ ದೊರೆಯಬಹುದು. ಧರ್ಮದಿಂದಲೇ ಹಣ ದೊರಕುತ್ತದೆಯೆಂಬ ನಿಯಮ-

ವೇನೂ ಇಲ್ಲವೆಂಬುದೇ ಈ ಮತ.) ಅರ್ಥಂ-ಧನವನ್ನು, ಅವಾಪ್ಯಾಪಿ-ಪಡೆದರೂ, ಅನರ್ಥಾರ್ಥಂ-ಇತರರಿಗೆ ಕೇಡುಮಾಡುವುದಕ್ಕೆ (ಭವತಿ-ಕಾರಣ-ನಾಗುತ್ತಾನೆ.) ಅನ್ಯತ್ರ-ಹಣವನ್ನು ಬಿಟ್ಟು ಕೇವಲ ಉಪವಾಸ, ವ್ರತ ಮುಂತಾದದ್ದು, ಆದ್ಯ-ಮೊದಲನೆಯ ಧರ್ಮಕ್ಕೆ, ಉಪಕಾರಕಂ-ಕಾರಣ-ವಾಗುತ್ತದೆ. ಇಹಾರ್ಥೇ-ಈ ವಿಷಯದಲ್ಲಿ, ಅಜ್ಞಾನನಿಕೃಷ್ಟಯಾ-ಅಜ್ಞಾನದಿಂದ ವಿವೇಚನೆಯಿಲ್ಲದೆ, ಅಬುದ್ಧಿಃ-ಮೂಢನು, ತತ್-ಧರ್ಮಾರ್ಥಗಳ ಫಲವನ್ನು, ನ-ಪಡೆಯಲಾರನು.

ತಾತ್ಪರ್ಯ :- ಧರ್ಮದಿಂದ ಧನಸಂಪಾದನೆಯೆಂದೂ, ಧನವಿದ್ದರೆ ಧರ್ಮ-ಕಾರ್ಯವನ್ನು ಮಾಡಬಹುದೆಂದೂ, ಕೆಲವರು ತಿಳಿದುಕೊಂಡಿದ್ದಾರೆ. ಧನಕ್ಕೆ ಧರ್ಮವೇ ಕಾರಣ ಎಂದು ಅವರ ಮತ. ಹಾಗೆಯೇ ಧರ್ಮಕಾರ್ಯಕ್ಕೆ ಧನ ಬೇಕಾದ್ದರಿಂದ ಯಾವುದಾದರೊಂದು ಮಾರ್ಗದಿಂದ-ವ್ಯವಸಾಯ ಮುಂತಾದ್ದ-ರಿಂದ ಧನವನ್ನು ಸಂಪಾದಿಸಬೇಕೆಂದೂ ಅವರು ಹೇಳುತ್ತಾರೆ. ಧನವಿದ್ದರೆ ಧರ್ಮಕಾರ್ಯಕ್ಕೆ ಸಹಜವಾಗಿ ತೊಡಗುತ್ತಾನೆ ಎಂದು ಅವರ ಭಾವನೆ. 'ಧನಕ್ಕಾಗಿ ಧರ್ಮ, ಧರ್ಮಕ್ಕಾಗಿ ಧನ' ಎಂದು ತಿಳಿದು ಅವೆರಡಕ್ಕೂ ತಳಿಕೆಯನ್ನು ಹಾಕಿ-ಬಿಟ್ಟಿದ್ದಾರೆ. ಧನದಿಂದ ಕಾಮ ಎಂಬುದಂತೂ ಸರ್ವಸಂಮತ. ಹೀಗಾಗಿ ತ್ರಿವರ್ಗವೇ ಪುರುಷಾರ್ಥವೆಂದು ಭ್ರಮಿಸಿ ಅದರಲ್ಲಿ ಮುಳುಗಿ ಹೋಗಿದ್ದಾರೆ. ಇದು ಸರಿಯಲ್ಲ. ಪುರುಷನ ಪ್ರಧಾನವಾದ ಉದ್ದೇಶ ಮೋಕ್ಷವಾಗಿರಬೇಕು. ಈ ತ್ರಿವರ್ಗಗಳನ್ನು ಪರಮಧ್ಯೇಯವೆಂದು ನಂಬುವುದರಲ್ಲಿ ಹುರುಳಿಲ್ಲ. ಇವು-ಗಳಿಗೆ ಪರಸ್ಪರ ಕಾರ್ಯಕಾರಣಭಾವ ಕೂಡುವುದಿಲ್ಲ. ಧರ್ಮಾರ್ಥಗಳಿಗೆ ತಳಿಕೆ ಹಾಕಿದುದು ಸರಿಯಲ್ಲ. ಹೇಗೆಂದರೆ, ಧನಸಂಪಾದನೆಗೆ ಧರ್ಮವೇ ಸಾಧನ-ವೆಂಬ ನಿಯಮ ಎಲ್ಲಿದೆ ? ಉದ್ಯೋಗ, ವ್ಯವಸಾಯಗಳಿಂದಲೂ ಧನವನ್ನು ಸಂಪಾದಿಸುತ್ತಾರಲ್ಲ. ಅಷ್ಟೇಕೆ ? ಮೋಸ, ಕಳ್ಳತನ ಮುಂತಾದ ಅಧರ್ಮ-ಮಾರ್ಗದಿಂದಲೂ ಹಣವನ್ನು ಸಂಪಾದಿಸಬಹುದಲ್ಲ ? ಇನ್ನು ಹಣವೇ ಧರ್ಮಕ್ಕೆ ಕಾರಣ ಎಂಬ ನಿಯಮವೂ ಇಲ್ಲ. ಉಪವಾಸ, ಭಜನೆ, ಗುರುಸೇವೆ ಮುಂತಾದ ಕಾರ್ಯಗಳಿಂದಲೂ ಧರ್ಮವನ್ನು ಸಂಪಾದಿಸಬಹುದಲ್ಲವೆ ? ಅಷ್ಟೇ ಅಲ್ಲ. ಹಣದಿಂದ ಮತ್ತನಾದ ಮನುಷ್ಯನು ಅನೇಕ ಅಧರ್ಮ ಕಾರ್ಯಗಳನ್ನೇ

ಮಾಡುತ್ತಾನೆ. ಆದ್ದರಿಂದ ಧರ್ಮಾರ್ಥಗಳು ಪರಸ್ಪರ ನಿಯಮದಿಂದ ಫಲವನ್ನು ಕೊಡಲಾರವು. ಅವುಗಳು ವ್ಯಭಿಚರಿತ. ಮೂರ್ಖನು ಮಾತ್ರ ಅವುಗಳನ್ನು ನಂಬಬಹುದು. ಆದ್ದರಿಂದ ಈ ತ್ರಿವರ್ಗದಲ್ಲಿ ಶ್ರದ್ಧೆಯನ್ನಿಡದೆ ಮೋಕ್ಷವೇ ಧ್ಯೇಯವೆಂದು ಪ್ರತಿಯೊಬ್ಬ ಬುದ್ಧಿಶಾಲಿಯೂ ತಿಳಿದಿರಬೇಕು.

**ಅಪಧ್ಯಾನ ಮಲೋ ಧರ್ಮೋ ಮಲೋಽರ್ಥಸ್ಯ ನಿಗೂಹನಂ ।**
**ಸಂಪ್ರಮೋದಮಲಃ ಕಾಮೋ ಭೂಯಃ ಸ್ವಗುಣವರ್ಜಿತಃ ॥**

ಈ ಶ್ಲೋಕದಲ್ಲಿ ತ್ರಿವರ್ಗದಲ್ಲಿರುವ ದೋಷವನ್ನೂ, ಅಂತಹ ದೋಷವನ್ನು ತ್ಯಜಿಸಿದ ತ್ರಿವರ್ಗವು ಮೋಕ್ಷಕ್ಕೆ ಸಾಧನವೆಂಬುದನ್ನೂ ಹೇಳಿದ್ದಾರೆ. ಇದರ ಕಡೆಯ ಪಾದದ ಅರ್ಥ ಕಠಿಣವಾಗಿದೆ

ಧರ್ಮಃ- ಧರ್ಮವು, ಅಪಧ್ಯಾನ- ಫಲೇಚ್ಛೆಯೇ, ಮಲಃ- ದೋಷವಾಗಿ ಉಳ್ಳದ್ದು, ಅರ್ಥಸ್ಯ- ಧನಕ್ಕೆ, ನಿಗೂಹನಂ- ಕೂಡಿಡುವುದೇ, ಮಲಃ- ದೋಷವು, ಕಾಮಃ- ಭೋಗವು, ಸಂಪ್ರಮೋದ- ಪರಮಸುಖವೆಂಬ ಭಾವನೆಯೇ, ಮಲಃ- ದೋಷವಾಗಿ ಉಳ್ಳದ್ದು, ಇದೇ ತ್ರಿವರ್ಗವು, ಸ್ವಗುಣವರ್ಜಿತಃ-ಸು- ಪೂರ್ತಿ- ಯಾಗಿ, ಅಗುಣ-ಫಲೇಚ್ಛೆ ಮುಂತಾದ ದುರ್ಗುಣಗಳಿಂದ, ವರ್ಜಿತಃ-ತ್ಯಜಿಸ- ಲ್ಪಟ್ಟರೆ, ಭೂಯಃ-ಶ್ರೇಷ್ಠವಾದ ಬ್ರಹ್ಮಾನಂದರೂಪ ಫಲವನ್ನು (ಪ್ರಯಚ್ಛತಿ- ಕೊಡುತ್ತದೆ).

ತಾತ್ಪರ್ಯ :- ಧರ್ಮ, ಅರ್ಥ, ಕಾಮಗಳನ್ನು ಪುರುಷಾರ್ಥದಲ್ಲಿ ಸೇರಿಸಿ ತ್ರಿವರ್ಗವೆಂದು ಶಾಸ್ತ್ರದಲ್ಲಿ ವ್ಯವಸ್ಥೆ ಮಾಡಿದ್ದಾರೆ. ಮನುಷ್ಯನಿಗೆ ಹಣ- ದಲ್ಲಿ, ಭೋಗದಲ್ಲಿ ಅಪೇಕ್ಷೆ ಸಹಜವಾಗಿರುತ್ತದೆ. ಇದು ಅನೇಕ ಜನ್ಮಗಳಿಂದ ಬಂದ ಸಂಸ್ಕಾರ. ಒಮ್ಮೆಯೇ ಈ ಅಪೇಕ್ಷೆಯನ್ನು ಬಿಡಲು ಸಾಧ್ಯವಿಲ್ಲ. ಇವುಗಳನ್ನು ಕ್ರಮವಾಗಿ ತ್ಯಜಿಸಲು ಹಿರಿಯರು ಉಪಾಯವನ್ನು ಹೇಳಿದ್ದಾರೆ. ಅರ್ಥ, ಕಾಮಗಳು ನಿಮಗೆ ಬೇಕೊ ? ಹಾಗಿದ್ದರೆ, ಧರ್ಮದ ಮೂಲಕವೇ ಸಂಪಾದಿಸಿರಿ. ಅರ್ಥ, ಕಾಮಗಳಲ್ಲಿಯೇ ಮುಳುಗಬೇಡಿ. ಧರ್ಮ ಮಾಡು- ವಾಗ ಫಲಾಭಿಸಂಧಿಯೇ ಇರಬಾರದು. ಕರ್ತವ್ಯಕರ್ಮ ಎಂಬ ಭಾವನೆ ಇರಲಿ. ಆದರಿಂದ ಅರ್ಥ ತಾನೇ ಲಭಿಸುವುದು. ಅದನ್ನು ಕೂಡಿಡುವುದು ತಪ್ಪು. ಒಂದು

ಭಾಗವನ್ನು ಧರ್ಮಕ್ಕೂ, ಇನ್ನೊಂದು ಭಾಗವನ್ನು ಭೋಗಕ್ಕೂ ಉಪಯೋಗಿಸ-ಬೇಕು. ಭೋಗದಲ್ಲಿ ಸುಖವುಂಟು. ಆದರೆ ಅದೇ ಪರಮಸುಖ-ಪರಮ-ಧ್ಯೇಯವೆಂದು ಭಾವಿಸಬಾರದು. ಹಾಗೆ ಭಾವಿಸಿದಲ್ಲಿ ಆ ಭಾವನೆ ಮತ್ತೆ ಧನಸಂಪಾದನೆಯ ಮಾರ್ಗದಲ್ಲಿ ಮನುಷ್ಯನನ್ನು ತಳ್ಳುವುದು. ಮನುಷ್ಯನು ಈ ತ್ರಿವರ್ಗದ ಸುಳಿವಿನಿಂದ ತಪ್ಪಿಸಿಕೊಳ್ಳಲಾರ. ಅಧರ್ಮ, ದುಃಖಗಳಿಗೂ ಭಾಗಿ-ಯಾದಾನು. ಆದ್ದರಿಂದ ಮೇಲ್ಕಂಡ ಮೂರು ದೋಷಗಳು ಇಲ್ಲದಂತೆ ತ್ರಿವರ್ಗವನ್ನು ಸೇವಿಸುತ್ತಿದ್ದರೆ ಧರ್ಮದ ಉಪಚಯದಿಂದ ಚಿತ್ತಶುದ್ಧಿಯಾಗಿ ಅರ್ಥ, ಕಾಮಗಳು ಅನಿತ್ಯವೆಂಬ ಭಾವನೆ ದೃಢವಾಗಿ ಮೋಕ್ಷದ ದಾರಿ ಸಮೀಪಿಸುವುದು.



ಬಲಿಚಕ್ರವರ್ತಿಯು ದೇವಲೋಕವನ್ನು ಜಯಿಸಿ ದೇವೇಂದ್ರನನ್ನು ಸ್ವರ್ಗ-ದಿಂದ ಓಡಿಸಿ ಬಹುಕಾಲ ದರ್ಪವನ್ನು ಮೆರೆಸಿದ್ದನು, ಕಾಲ ಪರ್ಯಸ್ತವಾಯಿತು. ದೇವತೆಗಳ ಕೈ ಮೇಲಾಯಿತು. ದೇವೇಂದ್ರನು ಬಲಿಯನ್ನು ಸೋಲಿಸಿ ಓಡಿಸಿದನು. ಇಂದ್ರನ ಭೀತಿಯಿಂದ ಬಲಿಯು ಕತ್ತೆಯ ವೇಷವನ್ನು ಧರಿಸಿ ಒಂದು ಹಾಳು ಮನೆಯಲ್ಲಿ ಅಡಗಿಕೊಂಡನು. ಇಂದ್ರನು ಬ್ರಹ್ಮದೇವನ ಮುಖದಿಂದ ಆ ಸ್ಥಳವನ್ನು ತಿಳಿದುಕೊಂಡು ಬಲಿಯನ್ನು ಅಪಹಾಸ್ಯಮಾಡ-ಬೇಕೆಂದು ಅಲ್ಲಿಗೆ ಹೋದನು. ಕತ್ತೆಯ ವೇಷದಲ್ಲಿದ್ದ ಬಲಿಯನ್ನು ಕೆಣಕು ಮಾತುಗಳಿಂದ ಹಾಸ್ಯಮಾಡಿದನು. ಆಗ ಬಲಿಯು ವೇದಾಂತದ ದೊಡ್ಡ ದೊಡ್ಡ ಮಾತುಗಳನ್ನು ಹೇಳುತ್ತಾ ''ಇಂದ್ರ, ಇದೆಲ್ಲಾ ಕಾಲಮಹಿಮೆ. ನಾನು ಇಷ್ಟು ಕಾಲ ವೈಭವದಿಂದ ಮೆರೆದೆ. ಈಗ ಈ ಸ್ಥಿತಿ ನನಗೆ ಬಂದಿತು. ಯಾರು ಬಲ್ಲರು? ಪುನಃ ಆ ಕಾಲ ನನಗೆ ಬಂದೀತು. ಆಗ ನೀನು ಎಲ್ಲಿ ಓಡಿ ಹೋಗಿ ಅಡಗುವೆಯೋ ? ನನಗೆ ಇದು ಕೆಟ್ಟ ಕಾಲವೆಂದು ಸುಮ್ಮನಿದ್ದೇನೆ. ಇಲ್ಲದಿದ್ದರೆ ಒಂದು ಗುದ್ದುಹಾಕಿ ವಜ್ರಧಾರಿಯಾದ ನಿನ್ನನ್ನೂ ಅಡ್ಡ ಬೀಳಿಸುತ್ತಿದ್ದೆನು. ಇದುವರೆಗೂ ನಿನ್ನನ್ನೂ, ದ್ವಾದಶಾದಿತ್ಯರನ್ನೂ ನಾನು ಮೆಟ್ಟಿ ತುಳಿದು ದರ್ಪದಿಂದ ರಾಜ್ಯಭಾರ ಮಾಡಲಿಲ್ಲವೆ ? ಆದ್ದರಿಂದ, ಶಕ್ರ, ಅಹಂಕಾರ ಪಡಬೇಡ. ನಾವೆಲ್ಲರೂ ಕಾಲಾಧೀನರು'' ಎಂದು ನುಡಿದು ಕಾಲದ ಸ್ವರೂಪವನ್ನು ಹೇಳುತ್ತಾನೆ.

**ಮಾಸಮಾಸಾರ್ಧ ವೇಶ್ಮಾನಮಹೋ ರಾತ್ರಾಭಿಸಂವೃತಂ ।**
**ಋತುದ್ವಾರಂ ವಾಯುಮುಖಮಾಯುರ್ವೇದವಿದೋ ಜನಾಃ ॥**

(ಶಾಂ. 224-46)

ಆಪಾತಾರ್ಥ :- ಆಯುರ್ವೇದವನ್ನು ಬಲ್ಲವರು ಕಾಲಕ್ಕೆ ಮಾಸ, ಪಕ್ಷಗಳು ಮನೆಯೆಂದೂ, ಅದು ಹಗಲು, ರಾತ್ರಿಗಳಿಂದ ಮುಚ್ಚಿದೆಯೆಂದೂ, ಅದರ ಮನೆಗೆ ಋತುಗಳೇ ದ್ವಾರಗಳೆಂದೂ, ವಾಯುವೇ ಮುಖವೆಂದೂ ಹೇಳುತ್ತಾರೆ.

ಇದರ ಅಭಿಪ್ರಾಯವು ತಿಳಿಯುವುದಿಲ್ಲ. ಆಯುರ್ವೇದವೆಂದರೆ ವೈದ್ಯ-ಶಾಸ್ತ್ರ ವೈದ್ಯರು ಕಾಲದ ಲಕ್ಷಣವನ್ನು ಹೇಳಲು ಕಾರಣವೂ ತಿಳಿಯದು.

ವಾಸ್ತವಾರ್ಥ :- ಆಯುರ್ವೇದವಿದಃ-ಆಯುಃ-ಬ್ರಹ್ಮವಸ್ತುವನ್ನು ಪ್ರತಿ-ಪಾದಿಸುವ, ವೇದ ಉಪನಿಷತ್ತುಗಳನ್ನು, ವಿದಃ-ಬಲ್ಲ, ಜನಾಃ-ಜನರು, (ಬ್ರಹ್ಮ ವಸ್ತುವನ್ನು) ಮಾಸಮಾಸಾರ್ಧವೇಶ್ಮಾನಂ-ತಿಂಗಳು, ಪಕ್ಷಗಳಿಗೆ ಗೃಹ-ವಾಗಿಯೂ, ಅಹೋರಾತ್ರಾಭಿಸಂವೃತಂ-ಅಹೋ, ರಾತ್ರಿಗಳೆಂಬ ಋತು-ಗಳಿಂದ ಗೂಢವಾಗಿಯೂ, ಋತುದ್ವಾರಂ-ವಸಂತಾದಿ ಋತುಗಳೇ ಪ್ರಾಪ್ತಿ-ಸಾಧನವಾಗಿಯೂ, ವಾಯು-ಸೂತ್ರಾತ್ಮನು, ಮುಖಂ-ಮುಖದಂತೆ ಪ್ರಥಮ ಲಭ್ಯನಾಗಿಯೂ ಇರುವ ಕಾಲವೆಂದು (ಆಹುಃ-ಹೇಳುತ್ತಾರೆ.)

ತಾತ್ಪರ್ಯ :- ಕಾಲವೆಂದರೆ ಪರಮಾತ್ಮನಲ್ಲದೆ ಬೇರೆಯಲ್ಲ. ತಾರ್ಕಿಕರು ಪಕ್ಷ ಮಾಸ ರೂಪವಾದ ಒಂದು ದ್ರವ್ಯವೇ ಕಾಲವೆಂದು ಹೇಳುತ್ತಾರೆ. ವಾಸ್ತವವಾಗಿ ಅಂತಹ ವಸ್ತು ಒಂದಿಲ್ಲ. ಕಾಲವೆಂಬುದು ವ್ಯವಹಾರದ ಅನುಕೂಲಕ್ಕಾಗಿ ಮಾಡಿಕೊಂಡಿರುವ ಒಂದು ಕಲ್ಪನೆ. ಈ ಕಲ್ಪನೆಗೆ ಅಧಿಷ್ಠಾನವಾಗಿರತಕ್ಕದ್ದು ಮಾಯಾಶಬಲವಾದ ಬ್ರಹ್ಮವಸ್ತು. ಆದ್ದರಿಂದ ವಸ್ತುತಃ ಕಾಲವೆಂದರೆ ಬ್ರಹ್ಮವಸ್ತುವೇ ಸರಿ. ಅಹೋರಾತ್ರಿಗಳೆಂದು ಕೆಲವು ಯಜ್ಞಗಳಿಗೆ ಹೆಸರು. ಕರ್ಮಕಾಂಡವು ಈ ಯಜ್ಞಗಳ ಫಲವನ್ನು ವರ್ಣಿಸಿ ಮನುಷ್ಯನನ್ನು ಯಜ್ಞ ಮಾಡುವಂತೆ ಪ್ರೇರಿಸುತ್ತದೆ. ಯಜ್ಞಫಲಗಳಲ್ಲಿ ಮನುಷ್ಯನು ಆಸಕ್ತನಾದರೆ ತತ್ತ್ವಜ್ಞಾನದ ಒಲವು ನಷ್ಟವಾಗಿ ಬ್ರಹ್ಮಪ್ರಾಪ್ತಿಯು ದೂರವಾಗುತ್ತದೆ. ಆದ್ದರಿಂದ ಈ ಅಹೋರಾತ್ರಿಗಳೆಂಬ ಯಜ್ಞಗಳು ಬ್ರಹ್ಮವಸ್ತುವನ್ನು ಕಾಣಿಸದಂತೆ

ಮುಚ್ಚಿಬಿಟ್ಟಿವೆ. ವಸಂತ ಋತುವಿನಲ್ಲಿ ಜ್ಯೋತಿಷ್ಟೋಮಯಾಗ ಮಾಡಬೇಕೆಂದು ವಿಧಿಯಿದೆ. ಈ ಯಾಗಗಳು ಚಿತ್ತ ಶುದ್ಧಿದ್ವಾರಾ ಬ್ರಹ್ಮಪ್ರಾಪ್ತಿಗೆ ಸಾಧನಗಳು. ಆದ್ದರಿಂದ ಕಾಲರೂಪವಾದ ಬ್ರಹ್ಮಕ್ಕೆ ಋತುಗಳು ದ್ವಾರವಾಗುತ್ತವೆ. ವಾಯುವೆಂದರೆ ಸೂತ್ರಾತ್ಮನೆನಿಸಿದ ಹಿರಣ್ಯಗರ್ಭ. ಕ್ರಮಮುಕ್ತಿಯಲ್ಲಿ ಜ್ಞಾನಿಯು ಹಿರಣ್ಯಗರ್ಭ ಲೋಕವನ್ನು ಸೇರಿ ಅನಂತರ ಬ್ರಹ್ಮಸಾಯುಜ್ಯವನ್ನು ಪಡೆಯುತ್ತಾನೆ. ಬ್ರಹ್ಮಸಾಯುಜ್ಯವನ್ನು ಪಡೆಯತಕ್ಕವನು ವಾಯುವೆಂಬ ಹಿರಣ್ಯಗರ್ಭನನ್ನು ಮೊದಲು ಪಡೆಯುವುದರಿಂದ ಬ್ರಹ್ಮವಸ್ತು ವಾಯುಮುಖವೆನಿಸಿಕೊಳ್ಳುತ್ತದೆ.

ಟಿಪ್ಪಣಿ :- 'ತಂ ಮಾಮಾಯುರಮೃತಮಿತ್ಯುಪಾಸ್ವ' ಎಂದು ಶ್ರುತಿಯಿರುವುದರಿಂದ ಆಯುಸ್ಸೆಂದರೆ ಬ್ರಹ್ಮವೆಂದರ್ಥ.

**ಆಹುಃ ಸರ್ವಮಿದಂ ಚಿಂತ್ಯಂ ಜನಾಃ ಕೇಚಿನ್ಮನೀಷಯಾ ।**
**ಅಸ್ಯಾಃ ಪಂಚೈವ ಚಿಂತಾಯಾಃ ಪರ್ಯೇಷ್ಯಾಮಿ ಚ ಪಂಚಧಾ ॥**

ಆಪಾತಾರ್ಥ :- ಇದೆಲ್ಲವೂ ಧ್ಯಾನಯೋಗವೆಂದು ಕೆಲವರು ತಮ್ಮ ಬುದ್ಧಿಬಲದಿಂದ ಹೇಳುತ್ತಾರೆ. ಈ ಧ್ಯಾನದ ಐದು ವಿಷಯಗಳನ್ನು ಐದು ಪ್ರಕಾರವಾಗಿ ನಾನು ಭಾವಿಸುತ್ತೇನೆ.

ವಿವರಣೆಯಿಲ್ಲದೆ ಇದರ ಅಭಿಪ್ರಾಯ ಗೊತ್ತಾಗುವುದಿಲ್ಲವೆಂಬುದು ಸ್ಪಷ್ಟವಾಗಿದೆ

ವಾಸ್ತವಾರ್ಥ :- ಕೇಚಿತ್ ಜನಾಃ-ಜೈಮಿನಿ ಮುಂತಾದ ಕೆಲವರು, ಇದಂ ಸರ್ವಂ-ಈ ಕಾಲಾಖ್ಯವಾದ ವಸ್ತುವೆಲ್ಲಾ, ಚಿಂತ್ಯಂ-ಧ್ಯಾನ ಯೋಗ್ಯವಾದದ್ದೆಂದು, ಮನೀಷಯಾ-ಬುದ್ಧಿಬಲದಿಂದ, ಆಹುಃ-ಹೇಳುತ್ತಾರೆ. (ಹಾಗೆ ಹೇಳಲು ಶಾಸ್ತ್ರದ ಬಲವಿಲ್ಲ) ಅಸ್ಯಾಃ-ಈ, ಚಿಂತಾಯಾಃ-ಧ್ಯಾನಕ್ಕೆ, ಪಂಚೈವ-(ಗೋಚರವಾದ) ಐದು ವಿಷಯಗಳನ್ನು, ಪಂಚಧಾ-ಒಂದೊಂದನ್ನು ಐದು ಪ್ರಕಾರಗಳನ್ನಾಗಿ, ಪರ್ಯೇಷ್ಯಾಮಿ-ತಿಳಿಯುತ್ತೇನೆ.

ತಾತ್ಪರ್ಯ :- ಕಾಲವೂ ಬ್ರಹ್ಮಸ್ವರೂಪವೇ ಎಂದು ಹೇಳಿದರೆ ಅದೂ ಧ್ಯಾನಕ್ಕೆ ಅರ್ಹವಾಯಿತಲ್ಲವೆ ? ಕಾಲದಂತೆ ಇತರ ದೇವತೆಗಳನ್ನು ಉಪಾಸನೆ ಮಾಡ-

ಬೇಕೆಂದೂ ಅವರೇ ಧ್ಯಾನ ಯೋಗ್ಯರೆಂದೂ ಜೈಮಿನಿ ಮುಂತಾದವರು ತಮ್ಮ ಗ್ರಂಥಗಳಲ್ಲಿ ಪ್ರತಿಪಾದಿಸಿದ್ದಾರೆ. ಇದೆಲ್ಲಾ ಅವರ ಬುದ್ಧಿ ಸಾಮರ್ಥ್ಯದಿಂದ ಕಲ್ಪಿಸಿದ ವಿಷಯ. ವೇದವು ''ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದ ಮುಪಾಸತೇ'' ಎಂದು ಘೋಷಿಸುತ್ತದೆ. ಸಕಲ ಪದಾರ್ಥಗಳೂ ಪರಮಾರ್ಥ-ದಲ್ಲಿ ಬ್ರಹ್ಮವೇ ಹೌದು. ಆದರೆ ಅವು ಪರಮಾತ್ಮನ ವಿವರ್ತಗಳು. ಸಾಕ್ಷಾತ್ ಪರಮಾತ್ಮನೇ ಅಲ್ಲ. ಆದ್ದರಿಂದ ಇವುಗಳನ್ನೇ ಪರಮಾತ್ಮನೆಂದು ಭಾವಿಸುವುದು ಸರಿಯಲ್ಲ. ಜ್ಞೇಯವಾದದ್ದು ಅಥವಾ ಉಪಾಸನೆಗೆ ಯೋಗ್ಯವಾದದ್ದು ಅಭ್ಯಾಸದಿಂದ ಬಂದದ್ದು. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ಪಂಚಕೋಶಗಳು ಧ್ಯಾನಕ್ಕೆ ಗೋಚರಿಸ ತಕ್ಕ ಐದು ವಿಷಯಗಳು. ಇವುಗಳಲ್ಲಿ ಒಂದೊಂದಕ್ಕೂ ಐದು ಪ್ರಕಾರಗಳು ಎಂದರೆ ಅವಯವಗಳು ಇವೆ. ಶಿರಸ್ಸು, ದಕ್ಷಿಣಪಕ್ಷ, ಉತ್ತರಪಕ್ಷ, ಮಧ್ಯದೇಶ, ಪುಚ್ಛಗಳೇ ಐದು ಅವಯವಗಳು. ಸಾರಾಂಶವೇನೆಂದರೆ, ಬ್ರಹ್ಮವು ಉಪಾಸನೆಗೆ ಸಾಧ್ಯವಾದದ್ದಲ್ಲ. ಜನರು ಪೂಜಿಸುವ ಯಾವ ದೇವತೆಯೂ ಬ್ರಹ್ಮವಲ್ಲ. ಹಾಗಿದ್ದರೆ ಸರ್ವವೂ ಬ್ರಹ್ಮವೇ ಎಂಬ ಮಾತು ಹೇಗೆ ಸರಿಹೋಗುತ್ತದೆಯೆಂದು ಕೇಳಬಹುದು. ಅಧ್ಯಾಸದಿಂದ (ಅವಿದ್ಯೆಯಿಂದ) ಉಪಾಸನಾರ್ಥವಾಗಿ, ನಾಮ, ರೂಪಗಳನ್ನು ಕಲ್ಪಿಸಿಕೊಂಡು ದೇವತೆಯೆಂದು ಕರೆಯುತ್ತಿದ್ದೇವೆ. ಈ ನಾಮ, ರೂಪಗಳನ್ನು ತೆಗೆದು ಹಾಕಿದರೆ ಗಟ್ಟಿಯಾಗಿ ಉಳಿಯುವುದು ಬ್ರಹ್ಮವೇ ಎಂದು ತಾತ್ಪರ್ಯ. ಹಗ್ಗವು ಹಾವಿನಂತೆ ಒಬ್ಬನಿಗೆ ತೋರಬಹುದು. ಅದು ಹಗ್ಗವೇ ಎಂದು ತಿಳಿದಾಗ 'ಈ ಹಾವು ಹಗ್ಗವೇ' ಎಂದು ಅವನು ಹೇಳುತ್ತಾನೆ. ಅಲ್ಲಿ ಹೇಗೆ ವಿರೋಧವಿಲ್ಲವೊ ಅದರಂತೆ ಇಲ್ಲಿಯೂ ಭಾವಿಸಬೇಕು.



ಒಮ್ಮೆ ದಕ್ಷಪ್ರಜಾಪತಿಯು ಹಿಮಾಲಯ ಪರ್ವತದ ಬಳಿ ದೊಡ್ಡ ಯಾಗ-ವನ್ನು ನಡೆಸಿದನು. ಅಲ್ಲಿಗೆ ಬ್ರಹ್ಮ ವಿಷ್ಣು ಮುಂತಾದ ಸಕಲ ದೇವತೆಗಳೂ, ಋಷಿಗಳೂ ದಯಮಾಡಿಸಿದ್ದರು. ಆದರೆ ಪರಮೇಶ್ವರನೊಬ್ಬನು ಬಂದಿರ-ಲಿಲ್ಲ. ಏಕೆಂದರೆ, ದಕ್ಷನು ಪರಮೇಶ್ವರನನ್ನು ಯಾಗಕ್ಕೆ ಆಹ್ವಾನಿಸಿರಲಿಲ್ಲ. ಆಗ ಸಭೆಗೆ ಬಂದಿದ್ದ ದಧೀಚಿಯು ಇದನ್ನು ಗಮನಿಸಿ ''ದಕ್ಷ ನೀನು ರುದ್ರನನ್ನು ಏಕೆ

ಯಜ್ಞಕ್ಕೆ ಆಹ್ವಾನಿಸಲಿಲ್ಲ ? ಅವನಿಲ್ಲದೆ ಯಾವ ಯಜ್ಞವೂ ಪೂರ್ಣವಾಗುವು-ದಿಲ್ಲ. ಶಂಕರನಿಗಿಂತ ಹಿರಿಯ ದೇವತೆಯಿಲ್ಲ'' ಎಂದನು. ಆದಕ್ಕೆ ದಕ್ಷನು ''ನಾನು ಏಕಾದಶ ರುದ್ರರನ್ನೂ ಆಹ್ವಾನಿಸಿದ್ದೇನೆ. ಅವರನ್ನು ಬಿಟ್ಟು ಮಹೇಶ್ವರನೆಂಬುವವನು ಯಾರೋ ನಾನರಿಯೆ. ವಿಷ್ಣು ಬಂದಿದ್ದಾನಲ್ಲ. ಅವನೇ ಯಜ್ಞಪತಿಯೆಂದು ನಾನು ಭಾವಿಸಿದ್ದೇನೆ. ಅವನಿಗೆ ಯಜ್ಞದ ಮುಖ್ಯ ಹವಿಸ್ಸನ್ನೂ ಅರ್ಪಿಸುತ್ತೇನೆ'' ಎಂದು ದರ್ಪದಿಂದ ಉತ್ತರ ಹೇಳಿದನು. ಈ ಸಂಗತಿಯು ಪರಮೇಶ್ವರನಿಗೆ ತಿಳಿಯಲು ಅವನು ಕ್ರುದ್ಧನಾದನು. ಅವನ ಮುಖದಿಂದ ವೀರಭದ್ರನು ಹುಟ್ಟಿದನು. ಪರಮೇಶ್ವರನ ಪತ್ನಿಯಾದ ಭವಾನಿಯ ಕೋಪದಿಂದ ಭದ್ರಕಾಳಿ ಹುಟ್ಟಿದಳು. ವೀರಭದ್ರನು ರುದ್ರಾಕಾರ-ವನ್ನು ಧರಿಸಿದ ಅನೇಕ ಗಣಗಳನ್ನು ಸೃಷ್ಟಿಸಿ ಅವರೆಲ್ಲರೊಡನೆ ಹೋಗಿ ದಕ್ಷನ ಯಜ್ಞವನ್ನು ಧ್ವಂಸಮಾಡಿದನು. ದಕ್ಷನಿಗೆ ಬುದ್ಧಿ ಬಂದಿತು. ಪರಮೇಶ್ವರನನ್ನು ಅವನು ಭಕ್ತಿಯಿಂದ ಸ್ತುತಿಸಲಾಗಿ ಅಗ್ನಿಕುಂಡದಲ್ಲಿ ಶಿವನು ಪ್ರತ್ಯಕ್ಷನಾದನು. ಭಕ್ತಿಭರದಿಂದ ಬಗ್ಗಿ ದಕ್ಷನು ಶಿವನನ್ನು ಎಂಟು ಸಾವಿರ ನಾಮಗಳಿಂದ ಸ್ತುತಿಸಿದನು. ಈ ಶ್ಲೋಕಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಿದೆ.

**ನಮೋ ವೃಷಾಯ ವೃಷ್ಯಾಯ ಗೋವೃಷಾಯ ವೃಷಾಯಚ ।**
**ಕಟಂಕಟಾಯ ದಂಡಾಯ ನಮಃ ಪಚಪಚಾಯ ಚ ॥** (ಶಾಂ. 12-98)

ವೃಷಾಯ-ವೃಷ್ಟಿಯನ್ನು ಸುರಿಸತಕ್ಕವನು, ವೃಷ್ಯಾಯ-ಧರ್ಮವೃದ್ಧಿ ಮಾಡ-ತಕ್ಕವನೂ, ಗೋವೃಷಾಯ-ನಂದಿಕೇಶ್ವರನೂ, ವೃಷಾಯ-ಧರ್ಮಸ್ವರೂಪನೂ ಆದ ನಿನಗೆ, ನಮಃ-ನಮಸ್ಕಾರ, ಕಟಂಕಟಾಯ-ಯಾವಾಗಲೂ ಗಮನ-ಶೀಲನೂ, ದಂಡಾಯ-ನಿಯಮಕರ್ತನೂ, ಪಚಪಚಾಯ-ಪಂಚಭೂತ-ಗಳನ್ನೂ ಪ್ರಾಣಿಗಳನ್ನೂ ಪಾಕಮಾಡತಕ್ಕವನೂ ಆದ ನಿನಗೆ, ನಮಃ-ನಮಸ್ಕಾರ.

ಟಿಪ್ಪಣಿ :- ಮೋಡವು ಮಳೆ ಸುರಿಯುವುದಕ್ಕೂ ಪರಮೇಶ್ವರನ ಆಜ್ಞೆಯೇ ಕಾರಣವಾದ್ದರಿಂದ ಅವನು ವೃಷ. ಧರ್ಮಿಷ್ಠರನ್ನು ರಕ್ಷಿಸುವುದರಿಂದ ವೃಷ್ಯ. ಶಿವನ ವಾಹನ ನಂದಿಕೇಶ್ವರನೂ ಪರಮಾರ್ಥದಲ್ಲಿ ಶಿವನೇ. ವೃಷ ಎಂದರೆ ಶಬ್ದ. 'ವೃಷಭೋ ವರ್ಷಣಾತ್' ಮಹಾಭಾಷ್ಯ. ಶಬ್ದವು ಶಿವನ ಸ್ವರೂಪವನ್ನು

ವರ್ಣಿಸುತ್ತದೆ. ದಿಗಂತಗಳಿಗೆ ಶಿವನ ಮಹಿಮೆಯನ್ನು ಒಯ್ಯುತ್ತದೆ. ಶಬ್ದವೆಂದರೆ ವೇದವೇ; ಶಿವನು ಅರ್ಥಸ್ವರೂಪ. ಅವನ ವಾಹನ ಶಬ್ದ. ಇದು ತಾತ್ತ್ವಿಕವಾದ ವಿಷಯ. ಪುರಾಣಗಳಲ್ಲಿ ಈ ವೃಷವೇ ವೃಷಭವಾಗಿದೆ. ಕಟೀ-ಗತೌ ಎಂಬ ಧಾತುವಿನಿಂದ ಕಟಂಕಟ ಶಬ್ದ ಹುಟ್ಟಿದೆ. ಪಚಪಚಾಯಚ ಎಂಬಲ್ಲಿ 'ಭೂತಾನಿ ಕಾಲಃ ಪಚತೀತಿ ವಾರ್ತಾ' ಎಂಬ ಮಾತನ್ನು ಸ್ಮರಿಸಿಕೊಳ್ಳಬೇಕು.

**ನಮಶ್ಚಂಡಿಕಘಂಟಾಯ ಘಂಟಾಯಾಘಂಟಘಂಟಿನೇ ।**
**ಸಹಸ್ರಾಧ್ಮಾತಘಂಟಾಯ ಘಂಟಾಮಾಲಾಪ್ರಿಯಾಯ ಚ ॥**

ಚಂಡಿಕ-ಭಯಂಕರವಾದ, ಘಂಟಾಯ-ಘಂಟಾಧ್ವನಿಯುಳ್ಳವನೂ ಘಂಟಾಯ-ಘಂಟಾನಾದಸ್ವರೂಪನೂ, ಅಘಂಟ-ನಾದಕ್ಕೆ ಕಾರಣವಿಲ್ಲ-ದಿದ್ದರೂ, ಘಂಟಿನೇ-ನಾದಸ್ವರೂಪನಾಗಿಯೂ, ಸಹಸ್ರ-ಸಹಸ್ರಾರಚಕ್ರದಲ್ಲಿ, ಆಧ್ಮಾತ-ಪ್ರಕಾಶವಾದ, ಘಂಟಾಯ-ನಾದವುಳ್ಳವನಾಗಿಯೂ, ಘಂಟಾಮಾಲಾ -ನಾದಹೇತುಗಳಾದ ಪಂಚಪ್ರಾಣಗಳಿಗೆ, ಪ್ರಿಯಾಯ-ಪ್ರಿಯನಾದ ನಿನಗೆ, ನಮಃ-ನಮಸ್ಕಾರ.

ಟಿಪ್ಪಣಿ :- ಪರಮೇಶ್ವರನ ಆಜ್ಞಾರೂಪವಾದ ಶಬ್ದವು ಶತ್ರು ಭಯಂಕರ-ವಾದದ್ದು; ಅವನೇ ನಾದವಂತನೂ ಹೌದು; ನಾದವೂ ಹೌದು. ಅವನು ಅನಾಹತ ಧ್ವನಿಸ್ವರೂಪನಾದ್ದರಿಂದ ಅಘಂಟಘಂಟಿ; ಸಹಸ್ರಾರ ಚಕ್ರದಲ್ಲಿ ಯೋಗಿಗಳು ಅವನ ಘಂಟಾನಾದದನ್ನು ಕೇಳಬಲ್ಲರು ಎಂದರೆ ಸಾಕ್ಷಾತ್ಕರಿಸಿ ಕೊಳ್ಳಬಲ್ಲರು. ಪ್ರಾಣಿಗಳು ಶಬ್ದಮಾಡಲು ಪಂಚಪ್ರಾಣಗಳ ಸಹಾಯ ಬೇಕು. ಆ ಪ್ರಾಣಗಳು ಪರಮೇಶ್ವರನನ್ನೇ ಆಶ್ರಯಿಸಿಕೊಂಡಿವೆ. ಆದ್ದರಿಂದ ಶಿವನು ಘಂಟಾಮಾಲಾಪ್ರಿಯ.

**ಹೂಂಹೂಂಹೂಂಕಾರಪಾರಾಯ ಹೂಂಹೂಂಕಾರಪ್ರಿಯಾಯ ಚ ।**
**ನಮಃ ಶಮಶಮೇ ನಿತ್ಯಂ ಗಿರಿವೃಕ್ಷಾಲಯಾಯ ಚ ॥**

ಹೂಂ-ಕ್ರೋಧವನ್ನು ಸೂಚಿಸುವ ಹೂಂಕಾರ, ಹೂಂ-ಅಭಿಹಿಂಕಾರವೆಂಬ ಹೂಂಕಾರ, (ಹೂಂಕಾರ) ಹ್-ಆಕಾಶ, ಊ-ಸೂರ್ಯ, ಮಕಾರ-ಇವುಗಳಿಗೆ ಕಾರಣನಾದ ಈಶ್ವರ. ಇವರೆಲ್ಲರಿಗೆ ಪಾರಾಯ-ಆಚೆ ಇರುವ ಶಾಂತ

ಬ್ರಹ್ಮನೂ, ಹೂಂಹೂಂಕಾರ-(ಕ್ರೋಧವನ್ನು ಸೂಚಿಸುವ ಮೊದಲನೆಯ ಹೂಂಕಾರವನ್ನು ಬಿಟ್ಟು ಉಳಿದ) ಎರಡು ಹೂಂಕಾರಗಳನ್ನು, ಪ್ರಿಯಾಯ- ಪ್ರೀತಿಸತಕ್ಕವನೂ, ಶಮಶಮೇ-ಅತ್ಯಂತ ಶಾಂತಸ್ವರೂಪನೂ, ಗಿರಿವೃಕ್ಷಾ- ಲಯಾಯ-ಬೆಟ್ಟಗಳಲ್ಲಿಯೂ ವೃಕ್ಷಗಳಲ್ಲಿಯೂ ವಾಸಿಸತಕ್ಕವನೂ ಆದ ನಿನಗೆ, ನಿತ್ಯಂ-ಯಾವಾಗಲೂ ನಮಃ-ನಮಸ್ಕಾರ.

ಟಿಪ್ಪಣಿ :- ಭೂಃ, ಭುವಃ, ಸುವಃ ಎಂಬ ಮೂರು ಲೋಕಗಳಿಗೆ ಹೂಂಕಾರವೆಂಬ ಸಂಜ್ಞೆಯಿದೆ. ಆಶ್ವಲಾಯನ ಮುಂತಾದ ಯಾಜ್ಞಿಕರು ಈ ಹೂಂಕಾರಕ್ಕೆ ಅಭಿಹಿಂಕಾರ ಎಂಬ ಸಂಜ್ಞೆಯನ್ನಿಟ್ಟಿದ್ದಾರೆ. ಮೊದಲನೇ ಪಾದದ ಮೂರನೇ 'ಹೂಂ' ಶಬ್ದವನ್ನು ಹ್+ಊ+ಮ್ ಎಂದು ಪದಚ್ಛೇದ ಮಾಡಿ- ಕೊಳ್ಳಬೇಕು. ಶಮಶಮೇ ಎಂಬುದು ಕ್ವಿಪ್ ಪ್ರತ್ಯಯಾಂತ; ಚತುರ್ಥೀ ವಿಭಕ್ತಿ.

**ಮತ್ಸ್ಯೋ ಜಲಚರೋ ಜಾಲ್ಯೋಽಕಲಃ ಕೇಲಿಕಲಃ ಕಲಿಃ ।**
**ಅಕಾಲಶ್ಚಾತಿಕಾಲಶ್ಚ ದುಷ್ಕಾಲಃ ಕಾಲ ಏವ ಚ ॥**

ಹೇ ಪರಮೇಶ್ವರ, ಜಲಚರಃ-ಸಂಸಾರ ನದೀ ಜಲದಲ್ಲಿ ಸಂಚರಿಸುವ, ಮತ್ಸ್ಯಃ-ಮೀನಿನಂತಿರತಕ್ಕ ಜೀವನೂ ನೀನೇ; ಜಾಲ್ಯಃ-ವಾಸನಾಜಾಲಕ್ಕೆ ಸಿಕ್ಕಿ- ಕೊಂಡವನಾದರೂ, (ಪರಮಾರ್ಥದಲ್ಲಿ) ಅಕಲಃ-ಸಿಕ್ಕಿಕೊಂಡಿರತಕ್ಕವನಲ್ಲ. ಕೇಲಿ-ಲೀಲಾರ್ಥವಾದ, ಕಲಃ-ಬಂಧನವುಳ್ಳವನು, ಕಲಿಃ-ಮಹಾಶೂರನು, ಅಕಾಲಃ-ಕಾಲಪರಿಮಿತಿ ಇಲ್ಲದವನು, ಅತಿಕಾಲಃ-ಮೃತ್ಯುವನ್ನು ಮೀರಿದವನು, ದುಷ್ಕಾಲಃ-ದುಷ್ಟರಿಗೆ ಕೇಡನ್ನು ಉಂಟುಮಾಡತಕ್ಕವನು, ಕಾಲ ಏವ ಚ- ಕಾಲಸ್ವರೂಪನು.

**ಘಂಟೋಽಘಂಟೋ ಘಟೀ ಘಂಟೀ ಚರುಚೇಲೀ ಮಿಲೀ ಮಿಲೀ ।**
**ಬ್ರಹ್ಮಕಾಯಿಕಮಗ್ನೀನಾಂ ದಂಡೀ ಮುಂಡಸ್ತ್ರಿದಂಡಧೃಕ್ ॥**

ಹೇ ಪರಮೇಶ್ವರ, ನೀನು ಘಂಟಃ-ಪ್ರಕಾಶ ಸ್ವರೂಪನು; ಅಘಂಟಃ- ಪ್ರಕಾಶರಹಿತನು; ಘಟೀ-ಜನರಿಗೆ ಕರ್ಮಫಲದ ಸಂಘಟನೆ ಮಾಡತಕ್ಕವನು, ಘಂಟೀ-ಘಂಟಾರೂಪವಾದ ಓಂಕಾರಕ್ಕೆ ವಾಚ್ಯನು; ಚರು-ಜೀವರೊಡನೆ, ಚೇಲೀ-ಕ್ರೀಡಿಸತಕ್ಕವನು; ಮಿಲೀ-ಸರ್ವ ವಸ್ತುಗಳಲ್ಲಿಯೂ ಮಿಲನ

ಉಳ್ಳವನು (ವಿಭು); ಮತ್ತು ಮಿಲೀ-ಸರ್ವವಸ್ತುಗಳಿಗೂ ಕಾರಣನಾದ್ದರಿಂದ ಮಿಲನ ಉಳ್ಳವನು, ಬ್ರಹ್ಮ-ಪ್ರಣವರೂಪನು, ಅಗ್ನೀನಾಂ-ತ್ರೇತಾಗ್ನಿಗಳಿಗೆ, ಕಾಯಿಕಂ-ಅರ್ಧಾಂಗಿಯಾದ ಸ್ವಾಹಾದೇವಿರೂಪನು, ದಂಡೀ-ದಂಡಧಾರಿ, ಮುಂಡಃ-ಪರಮಹಂಸನು, ತ್ರಿದಂಡಧೃಕ್-ಜನ್ಮ, ಜರಾ, ಮೃತ್ಯುಗಳೆಂಬ ಮೂರು ದಂಡಗಳಿಂದ ಜನರನ್ನು ದಂಡಿಸತಕ್ಕವನು.

ಟಿಪ್ಪಣಿ :- ಪರಮಾತ್ಮನೇ ಅವಿದ್ಯೆಯಿಂದ ಜೀವನಾಗಿ ಸಂಚರಿಸುತ್ತಾನಾದ್ದ-ರಿಂದ ಜೀವದಶೆಯಲ್ಲಿ ಪ್ರಕಾಶರಹಿತನಾಗಿ ಅಘಂಟನೆನ್ನಿಸಿಕೊಳ್ಳುತ್ತಾನೆ. 'ಬ್ರಹ್ಮಕಾಯಿಕಮಗ್ನೀನಾಂ' ಎಂಬ ಮಾತಿನಿಂದ ಓಂ.... ಸ್ವಾಹಾ ಎಂಬ ಹದಿನೆಂಟು ಅಕ್ಷರಗಳ ಮಂತ್ರವು ಸೂಚಿತವಾಗುತ್ತದೆ. ಇದು ಗಹನ ವಿಷಯವಾದ್ದರಿಂದ ವಿವರಿಸಿಲ್ಲ.

ವ್ಯಾಸವಾಕ್ಯರಹಸ್ಯಾರ್ಥಸ್ಫೋಟನಾಯ ಸ್ಫುಟಶ್ರಮಃ ।
ಸ್ಫೋಟಶಾಸ್ತ್ರಮಹಿಮ್ನಾಹಂ ವ್ಯಾಚಕ್ಷೆ ಕ್ಷಮ್ಯತಾಂ ಬುಧೈಃ ॥





## ವಿದ್ವಾನ್ ಎನ್. ರಂಗನಾಥಶರ್ಮಾ

ಸೊರಬದ ಸಮೀಪದಲ್ಲಿರುವ ನಡಹಳ್ಳಿಯು ಶ್ರೀ ರಂಗನಾಥ ಶರ್ಮಾ ಅವರ ಜನ್ಮಸ್ಥಳ. ಬೆಂಗಳೂರು ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ವ್ಯಾಕರಣಶಾಸ್ತ್ರ ಪ್ರಾಧ್ಯಾಪಕರಾಗಿ ನಿವೃತ್ತರಾಗಿದ್ದಾರೆ. ಸಮಗ್ರ ವಾಲ್ಮೀಕಿ ರಾಮಾಯಣವನ್ನು ಎಂಟು ಸಂಪುಟಗಳಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಶಾಸ್ತ್ರ ಗ್ರಂಥಗಳಾದ ಶ್ರುತಿಸಾರಸಮುದ್ಧರಣ, ವ್ಯಾಸತಾತ್ಪರ್ಯನಿರ್ಣಯ ಮೊದಲಾದ ಗ್ರಂಥಗಳನ್ನೂ ಅನುವಾದಿಸಿದ್ದಾರಲ್ಲದೆ ಕನ್ನಡದಲ್ಲಿ ಸುಮಾರು 45 ಗ್ರಂಥಗಳನ್ನು ರಚಿಸಿದ್ದಾರೆ. ಶ್ರೀಯುತರು ಮಾಡಿದ ಸಾಹಿತ್ಯ ಸೇವೆಗಾಗಿ ರಾಷ್ಟ್ರಪತಿ ಪ್ರಶಸ್ತಿ ಮತ್ತು ರಾಜ್ಯಪ್ರಶಸ್ತಿಗಳನ್ನು ಗಳಿಸಿದ್ದಾರೆ.